

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

**Vol-15** | **February- 2018** | **Issue No. 02** | **₹ 10/-**




Sri Vajubai Vala, Hon'ble Governor of Karnataka and Patron BS&G, Karnataka Presented Chaturtha Charan, Heerak Pankh & Rajya Puraskar Award Certificates to Cubs-Bulbuls, Scouts-Guides, Rovers & Rangers on 3rd Feb 2018 at Rajbhavan. Sri P.G.R. Sindhia, SCC, Smt. K. Rathnaprabha, IAS, Chief Secretary Govt. of Karnataka & Vice President BS&G, Smt. Geetha Nataraj, Vice President, NHQ & SC(G) of Karnataka, Sri M.A. Khalid, National Commissioner (S), NHQ & SC(S) of Karnataka & Sri Kondajji B. Shanmukhappa, Vice President of Karnataka are seen.



Swasthisri Charukeerthi Bhattaraka Swamiji of Shravanabelagolamatt Presenting a Memento to Sri P.G.R. Sindhia, S.C.C at National Level Rover-Ranger Service Camp on the Occasion of Maha Masthakabisheka. Smt. Rohini Sindhuri, I.A.S., Deputy Commissioner, Hassan Dist Sri C.N. Balakrishna, M.L.A., Shravanabelagola are seen.




Sri Basavaraj Horatti, Hon'ble Former Minister and MLC, Karnataka Inaugurated the State Level 40th Cubs & Bulbull Utsav at Dharwada on 19th January 2018. Sri Vedavyasa Kowlagi, President, Karnataka Balavikasa Academy, Sri P.G.R. Sindhia, S.C.C., Sri M.M. Londe, D.C.C. Dharwada, Cubs-Bulbuls, Office bearers of Dharwada District Association and others are seen.



ಜನವರಿ 26ರಂದು ಗದಗ ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ 69ನೇ ಗಣರಾಜ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಭಾಗವಹಿಸಿ ಪ್ರಥಮ ಸ್ಥಾನ ಪಡೆದ ಸ್ಕೌಟ್ ತಂಡಕ್ಕೆ ಮಾನ್ಯ ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಸಚಿವರಾದ ಶ್ರೀ ಹೆಚ್.ಕೆ. ಪಾಟೀಲ್ ಅವರು ಪ್ರಶಸ್ತಿ ಫಲಕನೀಡಿ ಗೌರವಿಸಿದರು.



ಹಾವೇರಿಯಲ್ಲಿ ಜರುಗಿದ 69ನ ಗಣರಾಜ್ಯೋತ್ಸವ ಸಮಾರಂಭದ ಪಥಚಲನ ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರಥಮ ಸ್ಥಾನ ಪಡೆದ ಗೈಡ್ಸ್‌ಗಳಿಗೆ ಮಾನ್ಯ ಮುಜರಾಯಿ ಹಾಗೂ ಜವಳಿಖಾತೆ ಸಚಿವರಾದ ಶ್ರೀ ರುದ್ರಪ್ಪ ಲಮಾಣಿ ಅವರು ಪ್ರಶಸ್ತಿ ನೀಡಿ ಗೌರವಿಸಿದರು.




ಫೆಬ್ರವರಿ 22ರಂದು ರಾಜ್ಯ ಸಂಸ್ಥೆ ಏರ್ಪಡಿಸಿದ್ದ ಲಾರ್ಡ್ ಬೇಡನ್ ಪೊವೆಲ್ ಹಾಗೂ ಆಲೆವ್ ಬೇಡನ್ ಪೊವೆಲ್ ಅವರ ಹುಟ್ಟುಹಬ್ಬದ ಅಂಗವಾಗಿ ಬೆಂಗಳೂರಿನ ಟೌನ್‌ಹಾಲ್ ಬಳಿ ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ರಾಜ್ಯ ಸ್ಥಾನಿಕ ಆಯುಕ್ತರು ಹಾಗೂ ಮಾನ್ಯ ವಿಧಾನ ಪರಿಷತ್ ಸದಸ್ಯರು ಹಸಿರು ನಿಶಾನೆ ತೋರಿಸುವುದರ ಮೂಲಕ ಉದ್ಘಾಟಿಸಿದರು. ಶ್ರೀಮತಿಯರಾದ ಬಿ. ರೇವತಿ, ಬಿ.ಡಿ. ಶಾಂತ, ಕೃಪ ವಿಜಯ, ಕೆ.ವಿ. ಶಾಮಲಾ, ಶ್ರೀ ಕೆ.ಹೆಚ್. ಜಯರಾಮಯ್ಯ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಜನವರಿ 26ರಂದು ತುಮಕೂರಿನ ಮಹಾತ್ಮಗಾಂಧಿ ಕ್ರೀಡಾಂಗಣದಲ್ಲಿ ಭಾರತೀಯ ರೆಡ್‌ಕ್ರಾಸ್ ಸಂಸ್ಥೆ ಮತ್ತು ವಾಕ್ ಶ್ರವಣ ದೋಷವುಳ್ಳ ಮಕ್ಕಳ ಶಾಲೆಯ ರಾಜ್ಯ ಪುರಸ್ಕಾರ ಪಡೆದ ಸ್ಕೌಟ್ಸ್‌ಗಳಿಗೆ ಮಾನ್ಯ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಟಿ.ಬಿ. ಜಯಚಂದ್ರ ಅವರು ಪ್ರಶಸ್ತಿ ನೀಡಿ ಗೌರವಿಸಿದರು. ಚಿತ್ರದಲ್ಲಿ ಶ್ರೀ ಮುದ್ದಹನುಮೇಗೌಡರು, ಮಾನ್ಯ ಲೋಕಸಭಾ ಸದಸ್ಯರು, ಶ್ರೀ ಸುರೇಶ್‌ಗೌಡರು, ಮಾನ್ಯ ವಿಧಾನಸಭಾ ಸದಸ್ಯರು ಹಾಗೂ ಇತರರು ಇದ್ದಾರೆ.



ಬಳ್ಳಾರಿ ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ 69ನೇ ಗಣರಾಜ್ಯೋತ್ಸವ ಕಾರ್ಯಕ್ರಮದ ಪಥಚಲನದಲ್ಲಿ ಉತ್ತಮ ಪ್ರದರ್ಶನ ನೀಡಿದ ಸ್ಕೌಟ್ಸ್‌ಗಳಿಗೆ ಮಾನ್ಯ ಕಾರ್ಮಿಕ ಮತ್ತು ಕೌಶಲ್ಯಾಭಿವೃದ್ಧಿ ಸಚಿವರಾದ ಶ್ರೀ ಸಂತೋಷ್ ಎಸ್. ಲಾಡ್ ಅವರು ಅಭಿನಂದಿಸಿ ಶುಭಹಾರೈಸಿದರು.



ಕೊಪ್ಪಳ ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ 69ನೇ ಗಣರಾಜ್ಯೋತ್ಸವ ಪಥಚಲನದಲ್ಲಿ ಭಾಗವಹಿಸಿ ತೃತೀಯ ಸ್ಥಾನ ಪಡೆದ ರೋವರ್ ತಂಡಕ್ಕೆ ಶ್ರೀಮತಿ ಕನಗವಲ್ಲಿ, ಮಾನ್ಯ ಜಿಲ್ಲಾಧಿಕಾರಿಗಳು ಪ್ರಶಸ್ತಿನೀಡಿ ಗೌರವಿಸಿದರು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# KARNATAKA Scout & Guide

MONTHLY NEWS MAGAZINE

## ಪರಿವಿಡಿ






ಸಂಚಿಕೆಯ ವಾರ್ಷಿಕ ಚಂದಾ ರೂ. 100/-

ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ.100/- ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ #39
ಅರಮನೆ ರಸ್ತೆ, ಬೆಂಗಳೂರು-560 001
ಇಲ್ಲಿಗೆ ಕಳುಹಿಸಲು ಕೋರಿದೆ.



ದೂ: 080-2226 0017, 2226 7470
ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org
ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scout-Guide, Karnataka



# ರಾಜ್ಯ ಮುಖ್ಯ ಆಯುಕ್ತರ ನುಡಿ

ನನ್ನ ಪ್ರೀತಿಯ ಸ್ಕೌಟ್ಸ್ ಮತ್ತು ಗೈಡ್ಸ್ ಗೆಳೆಯರೇ,

ಸಸ್ನೇಹ ನಮಸ್ಕಾರಗಳು,

ಕರ್ನಾಟಕವು ವಿಶಿಷ್ಟ ಸಾಂಸ್ಕೃತಿಕ ಸ್ಥಳ. ಭಾರತದ ಎಲ್ಲಾ ಪ್ರಮುಖ ಧರ್ಮಗಳು, ಶಾಂತಿ, ಸೌಹಾರ್ದ ಮತ್ತು ಮೋಕ್ಷದ ನೆಲೆಯಲ್ಲಿ ತಮ್ಮ ಚಟುವಟಿಕೆಗಳನ್ನು ಇಲ್ಲಿ ನಡೆಸುತ್ತಿವೆ. ಹಿಂದು, ಬೌದ್ಧ, ಜೈನ, ಮಹಮ್ಮದೀಯ, ಈಸಾಯಿ ಮುಂತಾದ ಧರ್ಮಗಳೊಂದಿಗೆ ತಮ್ಮದೇ ಆದ ವೈಶಿಷ್ಟ್ಯವನ್ನು ಬೆಳೆಸಿಕೊಂಡ ಆಧ್ಯಾತ್ಮಿಕ, ಸಾಂಸ್ಕೃತಿಕ ಜನಪದಗಳು ಇಲ್ಲಿ ಸಮೃದ್ಧಿಯನ್ನು ಕಂಡವು. ಸಮಾಧಾನದಿಂದ ಕೂಡಿ ಬಾಳಿದವು. ವಿಶ್ವಕ್ಕೆ ತಮ್ಮ ವಿಶಿಷ್ಟವಾದ ಸಂದೇಶವನ್ನು ಸಾರಿದವು. ಕರ್ನಾಟಕದ ಸಾಂಸ್ಕೃತಿಕ ಕೇಂದ್ರಗಳಲ್ಲಿ ಶ್ರವಣಬೆಳಗೊಳವು ಪ್ರಾಚೀನವಾದದ್ದು. ಮೂರನೆ ಶತಮಾನದ ಅಶೋಕನ ಶಾಸನಗಳು ಇಲ್ಲಿ ಕಂಡುಬರುತ್ತವೆ. ಚಂದ್ರಗುಪ್ತ ಮೌರ್ಯ ಮತ್ತು ಆತನ ಗುರು ಆಚಾರ್ಯ ಬದ್ರಬಾಹು ಇಲ್ಲಿ ತಪಸ್ಸನ್ನು ಆಚರಿಸಿದ್ದರು. 2300 ವರ್ಷಗಳಿಗೂ ಹೆಚ್ಚಿನ ಸಾಂಸ್ಕೃತಿಕ, ಧಾರ್ಮಿಕ ಇತಿಹಾಸವುಳ್ಳ ಶ್ರವಣಬೆಳಗೊಳವು ಈಗಲೂ ಅದೇ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ. ಶ್ರವಣಬೆಳಗೊಳದಲ್ಲಿ ವಿಂಧ್ಯಗಿರಿ ಮತ್ತು ಚಂದ್ರಗಿರಿ ಬೆಟ್ಟಗಳು ವಿಶಿಷ್ಟ ತಾಣಗಳಾಗಿವೆ. ಚಂದ್ರಗಿರಿಯಲ್ಲಿರುವ ಅನೇಕ ಬಸದಿಗಳಲ್ಲಿ ಜೈನಮುನಿಗಳು, ತಪಸ್ವಿಗಳು ವಿಶ್ವಕಲ್ಯಾಣಕ್ಕಾಗಿ ಪ್ರಾರ್ಥಿಸಿದ್ದಾರೆ. ವಿಂಧ್ಯಗಿರಿಯಲ್ಲಿ ಜಗದ್ವಿಖ್ಯಾತವಾದ 58 ಅಡಿ ಎತ್ತರದ ಬಾಹುಬಲಿಯ ಏಕ ಶಿಲಾಮೂರ್ತಿ ಇದೆ. ವಿಸ್ಮಯದ ನಗುವನ್ನು ಬೀರುತ್ತಿರುವ ಬಾಹುಬಲಿಯ ವಿಗ್ರಹವು ಜಗತ್ತಿಗೆ ತ್ಯಾಗ, ಶಾಂತಿ, ಅಹಿಂಸೆಯ ತತ್ವವನ್ನು ಸಾರುತ್ತಿರುವ ಸಜೀವ ಚೇತನವಾಗಿದೆ.

ಕ್ರಿ.ಶ.918ರಲ್ಲಿ ಈ ಮೂರ್ತಿಯನ್ನು ಪಶ್ಚಿಮ ಗಂಗರ (ರಾಜಧಾನಿ ತಲಕಾಡು) ದಿವಾನರಾಗಿದ್ದ ಚಾವುಂಡರಾಯರು ನಿರ್ಮಿಸಿದರೆಂದು ಹೇಳಲಾಗುತ್ತಿದೆ. "ಎಲ್ಲವನ್ನೂ ಗೆದ್ದ, ಎಲ್ಲವನ್ನೂ ತ್ಯಾಗಮಾಡಿದ" ಬಾಹುಬಲಿಯ ಐತಿಹ್ಯ ಅಷ್ಟೇ ಆಕರ್ಷಣೀಯವಾಗಿದೆ. ಮೊದಲ ಮಹಾಮಸ್ತಕಾಭಿಷೇಕದ ಕತೆ ಹೇಳುವಂತೆ ಚಾವುಂಡರಾಯರು ಕೊಡಗಟ್ಟಲೆ ಹಾಲು, ಸುಗಂಧ ದ್ರವ್ಯಗಳನ್ನು ಅಭಿಷೇಕಮಾಡಿದರೂ ಅದು ಗೊಮ್ಮಟೇಶ್ವರನ ವಿಗ್ರಹದ ಪಾದವನ್ನು ತಲುಪುತ್ತಿರಲಿಲ್ಲವಂತೆ. ಇದರಿಂದ ಬೇಸತ್ತು ಮನನೊಂದಿದ್ದ ಚಾವುಂಡರಾಯನಿಗೆ ಅಜ್ಜಿಯೊಬ್ಬಳು ಸಹಾಯಮಾಡುತ್ತಾಳೆ. ಪುಟ್ಟ ಬಟ್ಟಲಲ್ಲಿ ತಂದ ಹಾಲನ್ನು ಬಾಹುಬಲಿ ಸ್ವಾಮಿಗೆ ಅಭಿಷೇಕ ಮಾಡಿದಾಗ ವಿಗ್ರಹವು ಪಾದದತನಕ ನೆನೆಯುತ್ತದೆ. ದೇವರ ಮುಂದೆ ಅಹಂಕಾರಕ್ಕಿಂತ ಸಮರ್ಪಣೆ ಅಗತ್ಯ ಎಂಬುದನ್ನು ಇದು ಸೂಚಿಸುತ್ತದೆ. ಈ ಬಾರಿಯ ಮಹಾಮಸ್ತಕಾಭಿಷೇಕದ ಲಾಂಛನದಲ್ಲಿ "ಗುಳ್ಳಕಾಯ ಅಜ್ಜಿ"ಗೆ ಸ್ಥಾನಸಿಕ್ಕಿರುವುದು ಗಮನಾರ್ಹವಾದ ವಿಷಯ. ಕತೆಯ ಅರ್ಥವೂ ಮಹತ್ವದ್ದು.



ಫೆಬ್ರವರಿ 4 ರಿಂದ ಮಾರ್ಚ್ 3ರವರೆಗೆ ನಡೆದ ಮಹಾಮಸ್ತಕಾಭಿಷೇಕದ ಹಿನ್ನೆಲೆಯಲ್ಲಿ ಆಯೋಜಿಸಿದ್ದ "ರಾಷ್ಟ್ರೀಯ ಸೇವಾ ಶಿಬಿರ"ದಲ್ಲಿ 3500ಕ್ಕೂ ಹೆಚ್ಚು ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದಾರೆ. ಇದರಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಮತ್ತು ಹಾಸನ ಜಿಲ್ಲಾ ಸಂಸ್ಥೆಗೆ ಒಂದು ಅಪೂರ್ವ ಸೇವಾ ಅವಕಾಶ ದೊರತಂತಾಗಿತ್ತು. ಇವರಲ್ಲಿ ಕರ್ನಾಟಕದ ವಿವಿಧ ಜಿಲ್ಲೆಗಳಿಂದ ಸುಮಾರು 3100 ಮಕ್ಕಳು ಮತ್ತು ಇತರೆ 12 ರಾಜ್ಯಗಳಿಂದ 400 ಮಕ್ಕಳು ವಿವಿಧ ಹಂತಗಳಲ್ಲಿ ಭಾಗವಹಿಸಿದ್ದರು. ಪ್ರತಿ 5 ದಿನಕ್ಕೊಮ್ಮೆ 500 ಜನ ರೋವರ್ಸ್ / ರೇಂಜರ್ಸ್ ತಂಡವು ಬದಲಾವಣೆಯಾಗುತ್ತಿತ್ತು. ಹೀಗಾಗಿ ಚೈತನ್ಯ, ಉತ್ಸಾಹ, ಹುಮ್ಮಸ್ಸುಗಳು ಒಂದು ತಿಂಗಳ ಸೇವಾವಧಿಯ ಯಾವ ಸಂದರ್ಭದಲ್ಲೂ ಕುಗ್ಗಲಿಲ್ಲ.

"ಸ್ವಚ್ಛಭಾರತ್ ಮಿಷನ್"ನ ಅಡಿಯಲ್ಲಿ ವಿಂಧ್ಯಗಿರಿ, ಚಂದ್ರಗಿರಿ ಬೆಟ್ಟಗಳು, 12 ಉಪನಗರಗಳನ್ನು ನಮ್ಮ ಮಕ್ಕಳು ಸ್ವಚ್ಛಗೊಳಿಸಿದರು. 12 ಉಪನಗರಗಳಿಗೆ ಹೊಂದಿಕೊಂಡಂತಿದ್ದ 20 ಭೋಜನಾಲಯಗಳಲ್ಲಿ ಊಟ ಬಡಿಸುವ ಮತ್ತು

ಸ್ವಚ್ಛತೆಯನ್ನು ಕಾಪಾಡುವ ಜವಾಬ್ದಾರಿಗಳನ್ನು ಇವರು ವಹಿಸಿಕೊಂಡಿದ್ದರು. ನಮ್ಮ ಸ್ವಯಂಸೇವಕರು ಆಹಾರದ ಬಳಕೆಯ ಬಗ್ಗೆ ಜನಜಾಗೃತಿಯನ್ನುಂಟುಮಾಡುತ್ತಾ, ಒಂದು ಅಗುಳು ಅನ್ನವೂ ದಂಡವಾಗದಂತೆ ಕಾದಿದ್ದು ವಿಶೇಷ. 12 ಉಪನಗರಗಳ ಆರೋಗ್ಯ ಸೇವಾ ಕೇಂದ್ರಗಳಲ್ಲೂ ವೈದ್ಯಕೀಯ ಸಹಾಯಕರಾಗಿ ಶ್ರಮಿಸಿದರು. ಇವೆಲ್ಲಕ್ಕೂ ಕಳಶಪ್ರಾಯವಾಗಿ ಸೇವಾಕಾರ್ಯ ನಡೆದದ್ದು ವಿಂಧ್ಯಗಿರಿಯ ಬೆಟ್ಟದಲ್ಲಿ ಪ್ರತಿದಿನ 3 ತಂಡಗಳಲ್ಲಿ ಜವಾಬ್ದಾರಿಯನ್ನು ನಿರ್ವಹಿಸಿದರು. ನೀರು ಕೊಡುವುದು, ಮಕ್ಕಳಿಗೆ ಮತ್ತು ಹಿರಿಯ ನಾಗರೀಕರಿಗೆ ಬೆಟ್ಟವನ್ನು ಹತ್ತಲು ಸಹಾಯ ಮಾಡುವುದು, ಕೆಲವೊಮ್ಮೆ ಪುಟ್ಟಮಕ್ಕಳನ್ನು ತಾವೇ ಎತ್ತಿಕೊಂಡು ತಾಯಂದಿರೊಂದಿಗೆ ಬೆಟ್ಟವನ್ನು ಹತ್ತಿದ್ದಾರೆ.

ಈ ರಾಷ್ಟ್ರೀಯ ಸೇವಾ ಶಿಬಿರದಲ್ಲಿ ಭಾಗವಹಿಸಿದವರಲ್ಲಿ ಶೇಕಡ 40ರಷ್ಟು ರೇಂಜರ್ಸ್ ಇದ್ದದ್ದು ಹೆಮ್ಮೆಯ ವಿಷಯ. ರಾಷ್ಟ್ರನಿರ್ಮಾಣದಲ್ಲಿ ಲಿಂಗಬೇಧವಿಲ್ಲದೆ ಸಮ–ಸಮವಾಗಿ ಶ್ರಮಿಸಬೇಕಾದ ಅಗತ್ಯವನ್ನು ಈ ಶಿಬಿರ ತೋರಿಸಿಕೊಟ್ಟಿದೆ.

ಮಹಾಮಸ್ತಕಾಭಿಷೇಕಕ್ಕೆ ರಾಷ್ಟ್ರದ ಮೂಲೆ–ಮೂಲೆಗಳಿಂದ ಜನರು ಬಂದಿದ್ದರು. ರಾಷ್ಟ್ರಪತಿ, ಪ್ರಧಾನಮಂತ್ರಿ, ಮುಖ್ಯಮಂತ್ರಿ, ಮಾಜಿ ಪ್ರಧಾನಮಂತ್ರಿಗಳು ಸೇರಿದಂತೆ ಹಲವಾರು ಗಣ್ಯರು ಈ ಸಮಾರಂಭಕ್ಕೆ ಆಗಮಿಸಿದ್ದರು. ನಮ್ಮ ಮಕ್ಕಳ ಸೇವಾ ಕಾರ್ಯವು ಇವರೆಲ್ಲರ ಕಣ್ಮನಗಳನ್ನು ಸೆಳೆದಿದೆ. ವಿಶೇಷವಾಗಿ ಚಾರುಕೀರ್ತಿ ಭಟ್ಟಾರಕ ಸ್ವಾಮಿಗಳು ನಮ್ಮ ಶಿಬಿರಕ್ಕೆ ಆಗಮಿಸಿ "ಸ್ಕೌಟ್ಸ್ ಚಳವಳಿಯ ಬಗ್ಗೆ ನನ್ನ ಅಭಿಪ್ರಾಯವು ಸಂಪೂರ್ಣವಾಗಿ ಬದಲಾಗಿದೆ, ಸಮರ್ಪಣಾ ಭಾವದ ನಿಮ್ಮ ಸೇವಾಕಾರ್ಯದಿಂದ ಯಾತ್ರಾತ್ರಿಗಳಿಗೆ ಬಹಳ ಸಹಾಯವಾಗಿದೆ. ಬಾಹುಬಲಿ ಸ್ವಾಮಿಯ ಸಂಪೂರ್ಣ ಆಶೀರ್ವಾದವು ನಿಮ್ಮ ಮೇಲಿದೆ" ಎಂದು ಹಾರೈಸಿದರು.

ಈ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಈ ಅಪೂರ್ವವಾದ ಅವಕಾಶವನ್ನು ಕಲ್ಪಿಸಿಕೊಟ್ಟು ಎಲ್ಲಾ ರೀತಿಯ ಸಹಕಾರ ಮತ್ತು ನೆರವನ್ನು ನೀಡಿದ ಹಾಸನ ಜಿಲ್ಲಾಡಳಿತಕ್ಕೆ, ವಿಶೇಷವಾಗಿ ಜಿಲ್ಲಾಧಿಕಾರಿಗಳಾದ ಶ್ರೀಮತಿ ರೋಹಿಣಿ ಸಿಂಧೂರಿಯವರಿಗೆ, ಹೆಚ್ಚುವರಿ ಜಿಲ್ಲಾಧಿಕಾರಿಗಳಾದ ಶ್ರೀ ವರಪ್ರಸಾದ್ ರೆಡ್ಡಿರವರಿಗೆ ಹಾಗೂ ಇನ್ನಿತರೆ ಎಲ್ಲಾ ಅಧಿಕಾರಿಗಳಿಗೂ ನಮ್ಮ ಸಂಸ್ಥೆ ಅಭಾರಿಯಾಗಿದೆ.

ಶಿಬಿರದ ಆರಂಭಿಕ ಆಲೋಚನೆ ಮತ್ತು ಆಯೋಜನೆಗಳಿಂದ ಅಂತ್ಯದವರೆಗೆ ನಾನು ಶಿಬಿರದಲ್ಲಿ ಭಾಗವಹಿಸಿದ್ದೇನೆ. ಈ ರಾಷ್ಟ್ರೀಯ ಸೇವಾ ಶಿಬಿರದಲ್ಲಿ ಪಾಲ್ಗೊಂಡಿದ್ದು ನನ್ನ ಜೀವನದ ಅತ್ಯಂತ ಸಂತೋಷದ ಮತ್ತು ಅಮೂಲ್ಯವಾದ ಘಳಿಗೆ.

ಈ ರಾಷ್ಟ್ರೀಯ ಸೇವಾ ಶಿಬಿರದ ಯಶಸ್ಸಿಗೆ ಕಾರಣರಾದ ರಾಜ್ಯದ ಮತ್ತು ಹಾಸನ ಜಿಲ್ಲಾ ಸಂಸ್ಥೆ ಪದಾಧಿಕಾರಿಗಳಿಗೆ ನಾನು ಹೃತ್ಪೂರ್ವಕವಾಗಿ ಅಭಿನಂಧಿಸುತ್ತೇನೆ. ಈ ಶಿಬಿರದಲ್ಲಿ ಭಾಗವಹಿಸಿದ ಎಲ್ಲಾ ಸ್ಕೌಟರ್ಸ್ / ಗೈಡರ್ಸ್‌ಗಳಿಗೆ ನನ್ನ ಕೃತಜ್ಞತೆಗಳು. ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್ / ರೇಂಜರ್ಸ್ ನಮ್ಮ ಸಂಸ್ಥೆಯ ಹೆಮ್ಮೆಯ ಪ್ರತಿನಿಧಿಗಳಾಗಿದ್ದಾರೆ. ತಮ್ಮ ಅನುಭವಗಳನ್ನು ಮುಂದಿನ ಸಂಚಿಕೆಗಳಲ್ಲಿ ಹಂಚಿಕೊಳ್ಳಬೇಕೆಂದು ಕೋರುತ್ತೇನೆ.

ಜನವರಿ 26ರ ಗಣರಾಜ್ಯೋತ್ಸವ ದಿನಾಚರಣೆಯು ಅರ್ಥಪೂರ್ಣವಾಗಿ ನಡೆಯಿತು. ಕಳೆದ 68 ವರ್ಷಗಳಲ್ಲಿ ನಮ್ಮ ಸಂವಿದಾನದ ಅನುಗುಣವಾಗಿ ನಡೆದು ಬರುತ್ತಿರುವ ಸರ್ಕಾರಿ, ಸಾರ್ವಜನಿಕ ಮತ್ತು ಇತರ ಚಟುವಟಿಕೆಗಳು ಭಾರತವನ್ನು ಒಂದು ಸಮರ್ಥ ಪ್ರಜಾಪ್ರಭುತ್ವವನ್ನಾಗಿ ರೂಪಿಸಿದೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿದವರು ಸಂವಿಧಾನ ಕತೃಗಳನ್ನು ನೆನೆಯುವುದು ಇಂದಿನ ಅಗತ್ಯವಾಗಿದೆ.

1948ರ ಜನವರಿ 30ರಂದು ಮಹಾತ್ಮಗಾಧೀಜಿಯವರ ಕೊಲೆಯಾಯಿತು. ಸತ್ಯ ಮತ್ತು ಅಹಿಂಸಾ ತತ್ವಗಳ ಮೇಲೆ ಸಂಕುಚಿತ ಚಿಂತನೆಯ ಪ್ರಹಾರ ಗ್ರಾಂಧೀಜಿಯವರ ಕೊಡುಗೆ ಭಾರತಕ್ಕೆ ಅಪಾರ. ಸರ್ವೋದಯ ದಿನ, ಹುತಾತ್ಮರ ದಿನವನ್ನು ಅಂದು ಆಚರಿಸುತ್ತೇವೆ. ಇತಿಹಾಸವನ್ನು ತಾರ್ಕಿಕವಾಗಿ ಗ್ರಹಿಸಿ ಭವಿಷ್ಯವನ್ನು ಕಟ್ಟಲು ಚಿಂತಿಸಬೇಕಾದ ಸಮಯವಿದು.

ಕರ್ನಾಟಕದಲ್ಲಿ ಸ್ಕೌಟಿಂಗ್ ಚಳವಳಿಯು ಸಶಕ್ತವಾಗಿ ಬೆಳೆಯುತ್ತಿದೆ. ನಮ್ಮದೇ ಆದ ಹಲವಾರು ತರಬೇತಿ ಶಿಬಿರಗಳ ಜೊತೆಗೆ ಈ ತಿಂಗಳು ಎರಡು ರಾಷ್ಟ್ರೀಯ ಶಿಬಿರಗಳನ್ನು ಕರ್ನಾಟಕದಲ್ಲಿ ಆಯೋಜಿಸಲಾಗಿತ್ತು. ಮಂಗಳೂರಿನಲ್ಲಿ ಡಿಸೆಂಬರ್ 28 ರಿಂದ ಜನವರಿ 1ರ ವರೆಗೆ ವಿಶೇಷ ರಾಷ್ಟ್ರೀಯ ರೋವರ್/ ರೇಂಜರ್ ಮೂಟ್, ಬೆಳಗಾವಿಯಲ್ಲಿ ಜನವರಿ 7 ರಿಂದ 11ರವರೆಗೆ ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳಲ್ಲಿ ರಾಷ್ಟ್ರದ ವಿವಿಧ ಭಾಗಗಳಿಂದ ಆಗಮಿಸಿದ್ದ ಶಿಬಿರಾರ್ಥಿಗಳು ಶಿಸ್ತು, ಒಗ್ಗಟ್ಟು ಮತ್ತು ಶ್ರಮದ ಸಂದೇಶವನ್ನು ಪಡೆದಿದ್ದಾರೆ. ಎರಡೂ ಶಿಬಿರಗಳನ್ನು ಸಂಘಟಿಸಿದ ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳನ್ನು ನಾನು ಅಭಿನಂಧಿಸುತ್ತೇನೆ.

ರೋವರ್ಸ್-ರೇಂಜರ್ಸ್ ಚಳವಳಿಯ ನೂರನೆಯ ವರ್ಷದ ಸಂಭ್ರಮವು ಡಿಸೆಂಬರ್ 31, 2017ರಂದು ಮಂಗಳೂರಿನಲ್ಲಿ ಆರಂಭವಾಯಿತು. ದೇಶದಾದ್ಯಂತ 2018ರ ಡಿಸೆಂಬರ್‌ವರೆಗೆ ಶತಮಾನೋತ್ಸವ ಸಂಭ್ರಮದ ಹಲವಾರು ಕಾರ್ಯಕ್ರಮಗಳನ್ನು ರೋವರ್ಸ್ ಮತ್ತು ರೇಂಜರ್ಸ್‌ಗಳು ಆಯೋಜಿಸಬೇಕಾಗಿದೆ. ಹೆಚ್ಚಿನ ಯುವಕ-ಯುವತಿಯರನ್ನು ನಮ್ಮ ಚಳವಳಿಯತ್ತ ಸೆಳೆಯಬೇಕಾಗಿದೆ.




ಪ್ರತಿಭಾ ಪ್ರದರ್ಶನ, ಮಕ್ಕಳ ಪಥಚಲನೆ, ಸಾಹಸ ಚಟುವಟಿಕೆಗಳು, ಕೆಂಪು ಹೂ ಮತ್ತು ಕಲರವ ಮತ್ತು ಜಾನಪದ ಹಬ್ಬ, ಶಿಬಿರಾಗ್ನಿಗಳನ್ನೊಳಗೊಂಡ ಧಾರವಾಡದಲ್ಲಿ ನಡೆದ 40ನೇ ರಾಜ್ಯ ಮಟ್ಟದ ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವವು ತುಂಬಾ ಆನಂದವನ್ನುಂಟುಮಾಡಿತು. 22 ಜಿಲ್ಲೆಗಳಿಂದ 750ಕ್ಕೂ ಹೆಚ್ಚು ಕಬ್ಸ್ ಮತ್ತು ಬುಲ್‌ಬುಲ್ಸ್ ಉತ್ಸವದಲ್ಲಿ ಭಾಗವಹಿಸಿದ್ದರು. ಅತ್ಯಂತ ಯಶಸ್ವಿಯಾಗಿ ಉತ್ಸವವನ್ನು ನಡೆಸಿದ ಧಾರವಾಡ ಜಿಲ್ಲಾ ಸಂಸ್ಥೆಗೆ ನನ್ನ ಅಭಿನಂದನೆಗಳು.

ಫೆಬ್ರವರಿ 2 ರಂದು ಚತುರ್ಥಚರಣ್, ಹೀರಕ್‌ಪಂಖ್, ರಾಜ್ಯ ಪುರಸ್ಕಾರ್ ಪ್ರಶಸ್ತಿಗಳನ್ನು ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳಿಗೆ ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ವಜುಬಾಯಿ ವಾಲ ಅವರು ನೀಡಿದರು. ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಉತ್ತಮ ಕಾರ್ಯವನ್ನು ನಿರ್ವಹಿಸುತ್ತದೆಂದು ಮೆಚ್ಚುಗೆಯ ಮಾತುಗಳನ್ನಾಡಿದರು. ಶ್ರೀಮತಿ ಕೆ. ರತ್ನಪ್ರಭ, ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಇವರು ಮಾತನಾಡಿ ಸಂಸ್ಥೆಯ ಬೆಳವಳಿಗೆ ಹಾಗೂ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಸರ್ಕಾರದ ವತಿಯಿಂದ ಸಂಪೂರ್ಣ ಬೆಂಬಲವನ್ನು ನೀಡುವುದಾಗಿ ಘೋಷಿಸಿದ್ದು ಸಂತೋಷದ ವಿಷಯ.

ರಾಷ್ಟ್ರೀಯ ಸೇವಾ ಶಿಬಿರದ ಸಂದರ್ಭದಲ್ಲಿಯೇ ರಾಜ್ಯ ಮಟ್ಟದ **"INDABA"**, ಹಿಮಾಲಯ ವೃಕ್ಷಮಣಿಧಾರ ಸಮಾವೇಶ ಮತ್ತು ಸೇವಾ ಶಿಬಿರಗಳು ಶ್ರವಣಬೆಳಗೊಳದಲ್ಲಿಯೇ ನಡೆಯಿತು. ಫೆಬ್ರವರಿ 22ರಂದು ಸಂಸ್ಥೆಯ ಸ್ಥಾಪಕರಾದ ರಾಬರ್ಟ್ ಬೇಡನ್ ಪೋವೆಲ್ (ಜನನ 22.02.1857) ಮತ್ತು ಅಲೇವ್ ಲೇಡಿ ಬೇಡನ್ ಪೋವೆಲ್ (ಜನನ 22.02.1889) ಅವರುಗಳ ಹುಟ್ಟಿದ ಹಬ್ಬವನ್ನು ಚಿಂತನಾದಿನವನ್ನಾಗಿ ರಾಜ್ಯ, ಜಿಲ್ಲಾ, ಸ್ಥಳೀಯ ಮತ್ತು ಇತರ ಘಟಕಗಳಲ್ಲಿ ಆಚರಿಸಲಾಯಿತು. ಸ್ಕೌಟ್ ಚಳವಳಿಯಂತಹ ಮಹಾನ್ ಸಂಸ್ಥೆಯ ಕನಸನ್ನು ಕಂಡು ಜೀವನ ಪರ್ಯಂತ ಶ್ರಮಿಸಿ ಸಂಸ್ಥೆಯನ್ನು ಕಟ್ಟಿದ ಲಾರ್ಡ್ ಬೇಡನ್ ಪೋವೆಲ್ ಅವರು ಮಹಾನ್ ದಾರ್ಶನಿಕ ಮತ್ತು ಸಂಘಟಕರಾಗಿದ್ದಾರೆ. ಜಗತ್ತು ಅವರ ಕಾಣಿಕೆಗೆ ಯಾವಾಗಲೂ ಋಣಿಯಾಗಿರುತ್ತದೆ.



ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ನೂರುವರ್ಷಕ್ಕಿಂತಲೂ ಹೆಚ್ಚಾದ ಇತಿಹಾಸವಿದೆ. ನಮ್ಮಲಿನ ಕೆಲವು ದಳಗಳು ಶತಕದ ಸಂಭ್ರಮವನ್ನುಆಚರಿಸುತ್ತಿವೆ. ವಿಶೇಷವಾಗಿ ಬೆಂಗಳೂರಿನ ಮಲ್ಲೇಶ್ವರಂನಲ್ಲಿರುವ ಚಾಮುಂಡಿ ಮುಕ್ತದಳ ನೂರು ವರ್ಷಗಳ ಸಾರ್ಥಕ ಸೇವೆಯ ಹಬ್ಬವನ್ನು ಆಚರಿಸುತ್ತಿದೆ. ನೂರು ವರ್ಷಗಳ ಅಸ್ತಿತ್ವಕ್ಕೆ ಮತ್ತು ಯಶಸ್ವಿಗೆ ಕಾರಣರಾದ ಎಲ್ಲರನ್ನೂ ನಾನು ಈ ಸುಸಂದರ್ಭದಲ್ಲಿ ಜ್ಞಾಪಿಸಿಕೊಳ್ಳುತ್ತೇನೆ. ಅವರೆಲ್ಲರ ಪರಿಶ್ರಮದಿಂದ ಈ ಯಶಸ್ಸು ದೊರೆತಿದೆ. ಮುಂದುವರೆಸಿಕೊಂಡು ಹೋಗುವುದು ನಮ್ಮ ಜವಾಬ್ದಾರಿಯಾಗಿದೆ.

**"ಯುಗಾದಿ ಹಬ್ಬದ ಶುಭಾಶಯಗಳು"**. ನಿಮಗೆಲ್ಲರಿಗೂ ಪರೀಕ್ಷಾ ದಿನಗಳು ಸಮೀಪಿಸುತ್ತಿವೆ. ವಿದ್ಯಾಭ್ಯಾಸದಲ್ಲಿ ಪ್ರಗತಿಯನ್ನು ಸಾಧಿಸುವುದು ನಿಮ್ಮ ವೈಯಕ್ತಿಕ ಮತ್ತು ಸಾಮಾಜಿಕ ಜವಾಬ್ದಾರಿಯಾಗಿದೆ. ಶ್ರಮವಹಿಸಿ ಅಭ್ಯಸಿಸಿ. ನಿಮ್ಮ ಪಠ್ಯಕ್ಕೆ ಸಂಬಂಧಿಸಿದ ಅನುಮಾನಗಳನ್ನು ಸಂಕೋಚಟಡದೆ ನಿಮ್ಮ ಶಿಕ್ಷಕರೊಂದಿಗೆ ಚರ್ಚಿಸಿ. ಸಮಾಧಾನ ಪೂರ್ಣವಾದ ಪ್ರಸನ್ನತೆಯ ಮಾನಸಿಕ ಸ್ಥಿತಿಯನ್ನು ಪರೀಕ್ಷೆಯ ಸಂದರ್ಭದಲ್ಲಿ ನೀವೆಲ್ಲರೂ ಕಾಪಾಡಿಕೊಳ್ಳಬೇಕು. ಯಶಸ್ಸು ನಿಮ್ಮದಾಗಲಿ.

ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,

"ಒಗ್ಗಟ್ಟಿನಿಂದ ನಾಳಿನ ಸುದಿನದೆಡೆಗೆ ಹೆಜ್ಜೆ ಹಾಕೋಣ"

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ

ರಾಜ್ಯ ಮುಖ್ಯ ಆಯುಕ್ತರು

# ರಾಜಭವನ ರ್‍ಯಾಲಿ




ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ರಾಜ್ಯ ಮಟ್ಟದ 2017-18 ನೇ ಸಾಲಿನ ಚತುರ್ಥ ಚರಣ್ ಕಬ್ಸ್ ಹೀರಕ್ ಪಂಖ್ ಬುಲ್‌ಬುಲ್, ರಾಜ್ಯಪುರಸ್ಕಾರ ಸ್ಕೌಟ್ಸ್-ಗೈಡ್ಸ್,ರೋವರ್ಸ್, ರೇಂಜರ್ಸ್‌ಗಳಿಗೆ ರಾಜ್ಯಪುರಸ್ಕಾರ ಪ್ರಶಸ್ತಿ ಪ್ರಧಾನ ಸಮಾರಂಭದ ರ್‍ಯಾಲಿಯನ್ನು ಫೆಬ್ರವರಿ 02 ರಿಂದ 03, 2018ರ ವರೆಗೆ ಕೇಂದ್ರ ಕಾರ್ಯಾಲಯದ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು.

ಕರ್ನಾಟಕ ರಾಜ್ಯದ 32 ಜಿಲ್ಲೆಗಳಿಂದ ಒಟ್ಟು 42 ಕಬ್ಸ್, 13 ಕಬ್ ಮಾಸ್ಟರ್ಸ್, 38 ಬುಲ್-ಬುಲ್ಸ್, 12 ಫ್ಲಾಕ್ ಲೀಡರ್ಸ್, 149 ಸ್ಕೌಟ್ಸ್, 43 ಸ್ಕೌಟ್ ಮಾಸ್ಟರ್ಸ್, 109 ಗೈಡ್ಸ್, 29 ಗೈಡ್ ಕ್ಯಾಪ್ಟನ್ಸ್, 34 ರೋವರ್ಸ್, 29 ರೇಂಜರ್ಸ್, 11 ರೋವರ್ ಮತ್ತು ರೇಂಜರ್ ಲೀಡರ್ಸ್, 15 ಸೇವಾ ರೋವರ್ಸ್ ರೇಂಜರ್ಸ್, 60 ಪೋಷಕರು, 20 ರಾಜ್ಯ ಸಂಸ್ಥೆ ಪದಾಧಿಕಾರಿಗಳು ಪಾಲ್ಗೊಂಡಿದ್ದರು.

ಶಾಂತಿಗೃಹ ಆವರಣದಲ್ಲಿ ಫೆಬ್ರವರಿ 02 ರಂದು ಘನತೆವೆತ್ತ ರಾಜ್ಯಪಾಲರಿಂದ ಪ್ರಮಾಣ ಪತ್ರವನ್ನು ಸ್ವೀಕರಿಸುವ ವಿಧಾನವನ್ನು ಅಭ್ಯಸಿಸಲಾಯಿತು. ನಂತರ ಸಂಜೆ 5.30 ರಿಂದ 8.30ರ ವರೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಹಯೋಗದೊಂದಿಗೆ ಅತ್ಯುತ್ತಮವಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡಲಾಯಿತು.




ಫೆಬ್ರವರಿ 03ರಂದು ಬೆಳಗ್ಗೆ 10.30 ರಿಂದ 11.30ರ ವರೆಗೆ ರಾಜಭವನದ ಗಾಜಿನ ಮನೆಯಲ್ಲಿ ಪ್ರಶಸ್ತಿ ಪ್ರಧಾನ ಸಮಾರಂಭವು ನಡೆಯಿತು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಘನತೆವೆತ್ತ ರಾಜ್ಯಪಾಲರು ಮತ್ತು ಇತರೆ ಗಣ್ಯಮಾನ್ಯರನ್ನು ಹಾಗೂ ಪ್ರಶಸ್ತಿ ಪಡೆದ ಮಕ್ಕಳನ್ನು ಸ್ವಾಗತಿಸಿದರು. ಅವರು ತಮ್ಮ ಭಾಷಣದಲ್ಲಿ ಕರ್ನಾಟಕ ರಾಜ್ಯದ ಸ್ಕೌಟಿಂಗ್-ಗೈಡಿಂಗ್ ಅಭಿವೃದ್ದಿ, ಕಾರ್ಯಕ್ರಮಗಳು, ಚಟುವಟಿಕೆಗಳು, ತರಬೇತಿಗಳು, ಕೌಶಲ್ಯಾಭಿವೃದ್ಧಿ ಅಕಾಡೆಮಿ ಸ್ಥಾಪನೆ ಬಗ್ಗೆ, ತರಬೇತಿ ಶಿಬಿರಗಳ ಬೆಳವಣಿಗೆ ಬಗ್ಗೆ ಮತ್ತು ಜಿಲ್ಲೆಗಳ ಅಭಿವೃದ್ಧಿ ಬಗ್ಗೆ ಅಭಿನಂದಿಸಿ ಮಹಾಮಸ್ತಕಾಭಿಷೇಕದಲ್ಲಿ ರೋವರ್ಸ್ ಮತ್ತು ರೇಂಜರ್ಸ್‌ಗಳ ಸೇವೆಯ ಬಗ್ಗೆ ಮಾಹಿತಿ ನೀಡಿದರು.






ಶ್ರೀಮತಿ ಕೆ. ರತ್ನಪ್ರಭಾ, ಮುಖ್ಯ ಕಾರ್ಯದರ್ಶಿ, ಕರ್ನಾಟಕ ಸರ್ಕಾರ ಹಾಗೂ ರಾಜ್ಯಸಂಸ್ಥೆ ಉಪಾಧ್ಯಕ್ಷೆ ಇವರು ಮಾತನಾಡಿ ಸಂಸ್ಥೆಯ ಬೆಳವಣಿಗೆ ಹಾಗು ಮಕ್ಕಳ ಸರ್ವಾಂಗೀಣ ಅಭಿವೃದ್ಧಿಗೆ ಎಲ್ಲ ರೀತಿಯ ಸಹಕಾರ ನೀಡುವುದಾಗಿ ತಿಳಿಸಿದರು. ನಿರ್ಮಾಣ್ ಅಂತರರಾಷ್ಟ್ರೀಯ ಶಾಲೆಯ ಮಕ್ಕಳಿಂದ ರಾಷ್ಟ್ರೀಯ ಭಾವೈಕ್ಯತಾ ನೃತ್ಯವನ್ನು ಪ್ರದರ್ಶಿಸಲಾಯಿತು.




ಶ್ರೀ ವಾಜೂಬಾಯಿ ವಾಲಾ, ಘನತೆವೆತ್ತ ರಾಜ್ಯಪಾಲರು ಮಕ್ಕಳಿಗೆ ಪ್ರಶಸ್ತಿ ಪ್ರಧಾನ ಮಾಡಿ ಮಕ್ಕಳನ್ನು ಉದ್ದೇಶಿಸಿ ಮಾತನಾಡುತ್ತ ರಾಷ್ಟ್ರ ಭಕ್ತಿ, ರಾಷ್ಟ್ರ ಪ್ರೇಮ, ಮಕ್ಕಳಲ್ಲಿ ಮಾನವೀಯಮೌಲ್ಯಗಳ ಬೆಳವಣಿಗೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಉತ್ತಮ ಕಾರ್ಯವನ್ನು ನಿರ್ವಹಿಸುತ್ತಿದೆ ಎಂದು ಅಭಿನಂದಿಸಿ ಪ್ರೋತ್ಸಾಹಕರ ನುಡಿಗಳನ್ನು ಹೇಳಿದರು.

ವೇದಿಕೆಯ ಮೇಲೆ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು, ಶ್ರೀ ಎಂ.ಎ. ಖಾಲಿದ್, ಸ್ಕೌಟ್ ಆಯುಕ್ತರು ಶ್ರೀಮತಿ ಗೀತಾ ನಟರಾಜ್, ಗೈಡ್ ಆಯುಕ್ತರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ, ವಿಧಾನ ಪರಿಷತ್ ಸದಸ್ಯರು, ಶ್ರೀ ಚೆನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ, ಶ್ರೀಮತಿ ಭಾರತಿ ಚಂದ್ರಶೇಖರ್, ಉಪಾಧ್ಯಕ್ಷರು ಹಾಗೂ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಪದಾಧಿಕಾರಿಗಳು ಭಾಗವಹಿಸಿದರು. ಶ್ರೀಮತಿ ಗೀತಾ ನಟರಾಜ್, ರಾಜ್ಯ ಗೈಡ್ ಆಯುಕ್ತರು ವಂದನಾರ್ಪಣೆ ಮಾಡಿದರು. ಶ್ರೀಮತಿ ಮಂಜುಳ .ಸಿ, ರಾಜ್ಯ ಸಂಘಟನಾ ಆಯುಕ್ತರು(ಗೈ), ಕಾರ್ಯಕ್ರಮವನ್ನು ನಿರೂಪಿಸಿದರು.

## ಬಂದರು ಸ್ಕೌಟು ಮಕ್ಕಳು

ಸೇವಾ ಕಾರ್ಯಕೆ ಹೆಗಲು ಕೊಡಲು
ಬಂದರೆಲ್ಲರೂ ಸ್ಕೌಟು ಮಕ್ಕಳು
ಬಾಹುಬಲಿಯ ಬೀಡಿಗೆ
ಶ್ರವಣಬೆಳಗೊಳದ ಕ್ಷೇತ್ರಕೆ

ಸಾವಿರ ವರುಷದಿಂ ನಗುವಿನಿಂದ
ಗೆದ್ದುದೆಲ್ಲವ ಭರತಗಿತ್ತ, ತ್ಯಾಗಿ
ವಿರಾಗಿ ಮಹಾವೀರ ಬಾಹುಬಲಿಯ
ಮಹಾಮಜ್ಜನದಿ ಜನಸಾಗರವು

ವಿಂಧ್ಯಗಿರಿಯಲಿ ಬಾಹುಬಲಿಗೆ
ಅಟ್ಟಣೆಯ ಕಟ್ಟಿ ಎರೆದರು ಹಾಲು
ಮೊಸರು ಅರಿಶಿನ ಕುಂಕುಮ
ತರತರದ ಸುಗಂಧ ಓ ದೇವ ರಕ್ಷಿಸು

ಎಲ್ಲ ಗೆದ್ದೆವಗೆಂತ ಮಜ್ಜನ; ಮಜ್ಜನವು
ಸ್ವಾಮಿ ನಮ್ಮ ಭವಬಂಧನಕೆ

ನಿನಗೆ ಅರ್ಪಿತ ಸಕಲ ವಸ್ತುವು
ಮರಳಿ ಬರುವುದು ಆಶೀರ್ವಾದದಿ

ಸ್ಕೌಟು ಮಕ್ಕಳ ಮನಸು ನೋಡು
ಸೇವಾಭಾವವು ತುಂಬಿದೆ, ಯಾತ್ರಾರ್ಥಿ
ಹಿರಿಯರು, ಮಕ್ಕಳು, ಕೈಸಾಗದವರು
ದುಡಿವೆವು ಜನಹಿತಕೆ ನಾಡಬೆಳಕಿಗೆ

ಚಾರುಕೀರ್ತಿ ಭಟ್ಟಾರಕರು, ಮುಖ್ಯ
ಆಯುಕ್ತ ಸಿಂಧ್ಯರು ಹಿರಿಯರೆಲ್ಲರು
ತಟ್ಟಿಬೆನ್ನು ಹರಸಿಹರು ನಮ್ಮನ್ನು
ಅವರ ನಂಬಿಕೆ ಸತ್ಯ ಮಾಡುವೆವು
ಬಾಹುಬಲಿಯೆ ಹರಸು ಎಲ್ಲರ
ಶಾಂತಿ ತುಂಬಲಿ ಜಗದಲಿ, ಸತ್ಯ
ಅಹಿಂಸೆಯು ನಾಡಲಿದ್ದು, ಪ್ರಗತಿ
ಆಗಲಿ ಜಗವು ಭರತ ಭೂಮಿಯು

– ಬಿ.ಎಸ್. ರವೀಂದ್ರ

# ರಾಜ್ಯ ಮಟ್ಟದ 40ನೇ ಕಬ್-ಬುಲ್‌ಬುಲ್ ಉತ್ಸವ




ಜನವರಿ 19 ರಿಂದ 23 ರವರೆಗೆ ಕರ್ನಾಟಕ ರಾಜ್ಯದ 40ನೇ ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳ ಉತ್ಸವವನ್ನು ಧಾರವಾಡ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಆಚರಿಸಲಾಯಿತು. ಉತ್ಸವದಲ್ಲಿ ಒಟ್ಟು 782 ಮಕ್ಕಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು.

ಜನವರಿ 19 ರಂದು ಸಂಜೆ 4 ಗಂಟೆಗೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರ ಅಧ್ಯಕ್ಷತೆಯಲ್ಲಿ ಉತ್ಸವದ ಉದ್ಘಾಟನಾ ಸಮಾರಂಭ ನಡೆಯಿತು. ರಾಜ್ಯ ವಿಧಾನ ಪರಿಷತ್ ಸದಸ್ಯರೂ ಹಾಗೂ ಮಾಜಿ ಶಿಕ್ಷಣ ಸಚಿವರೂ ಆದ ಸನ್ಮಾನ್ಯ ಶ್ರೀ ಬಸವರಾಜ ಹೊರಟ್ಟಿಯವರು ಉತ್ಸವದ ಉದ್ಘಾಟಕರಾಗಿ, ಕರ್ನಾಟಕ ಬಾಲವಿಕಾಸ ಅಕಾಡೆಮಿಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ವೇದವ್ಯಾಸ ಕೌಲಗಿಯವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.





**ಸ್ಥಳೀಯ ಪ್ರತಿಭಾ ಪ್ರದರ್ಶನ:** ಜನವರಿ 19 ರಂದು ಸಂಜೆ ನಡೆದ ಸ್ಥಳೀಯ ಪ್ರತಿಭಾ ಪ್ರದರ್ಶನವನ್ನು ಹುಬ್ಬಳ್ಳಿ ಓರಿಯೆಂಟಲ್ ಪಬ್ಲಿಕ್ ಶಾಲೆಯ ಪ್ರಾಚಾರ್ಯರಾದ ಶ್ರೀಮತಿ ರಾಜೇಶ್ವರಿ ಕೃಷ್ಣಾ ಇವರು ಉದ್ಘಾಟನೆ ಮಾಡಿದರು. ಹುಬ್ಬಳ್ಳಿಯ ಲಯನ್ಸ್ ಕ್ಲಬ್ ಅಧ್ಯಕ್ಷರಾದ ಶ್ರೀ ಜ್ಞಾನೇಶ ನಾಥು ಇವರು ಮುಖ್ಯ ಅತಿಥಿಗಳಾಗಿದ್ದರು. ಹುಬ್ಬಳ್ಳಿ ಕೆ.ಎಲ್.ಇ. ಸಾಖರೆ ಇಂಗ್ಲೀಷ್ ಮಾಧ್ಯಮ ಶಾಲೆಯ ಪ್ರಾಚಾರ್ಯರಾದ ಶ್ರೀಮತಿ ಶರ್ಮಿಳಾ ಹೇಮಂತರವರು ಅಧ್ಯಕ್ಷತೆ ವಹಿಸಿದ್ದರು. ಓರಿಯೆಂಟಲ್ ಪಬ್ಲಿಕ್ ಶಾಲೆಯ ಹಾಗೂ ಸಾಖರೆ ಇಂಗ್ಲೀಷ್ ಮಾಧ್ಯಮ ಶಾಲೆಯ ಗೈಡ್ಸ್‌ಗಳು ವೈವಿಧ್ಯಮಯ ನೃತ್ಯಗಳನ್ನು ಸಾದರಪಡಿಸಿದ್ದರು. ಇದೇ ಸಂದರ್ಭದಲ್ಲಿ ಲಯನ್ಸ್ ಕ್ಲಬ್‌ನವರು 600 ಸಸಿಗಳನ್ನು ದೇಣಿಗೆ ನೀಡಿದರು.

**ಮಕ್ಕಳ ಪಥಚಲನ:** ಜನವರಿ 20 ರಂದು ಬೆಳಿಗ್ಗೆ 9.00 ಗಂಟೆಗೆ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕ ಸಂಘದ ಅಧ್ಯಕ್ಷರೂ ಹಾಗೂ ನವಲಗುಂದ ತಾಲ್ಲೂಕು ಆರೇಕುರಟ್ಟಿಯ ಹಿರಿಯ ಪ್ರಾಥಮಿಕ ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ವಾಯ್.ಎಚ್. ಬಣವಿಯವರು ಪಥಚಲನವನ್ನು ಹಸಿರು ನಿಶಾನೆಯನ್ನು ತೋರಿಸುವುದರೊಂದಿಗೆ ಉದ್ಘಾಟನೆ ಮಾಡಿದರು. ಹುಬ್ಬಳ್ಳಿ ರೈಲ್ವೆ ರೇಂಜರ್ಸ್ ಬ್ಯಾಂಡ್ ತಂಡವು ಪಥಚಲನದ ಮುಂಚೂಣಿಯಲ್ಲಿತ್ತು.

**ಸಾಹಸ ಚಟುವಟಿಕೆಗಳ ಪ್ರದರ್ಶನ:** ಅದೇ ದಿನ ಬೆಳಿಗ್ಗೆ 11.00 ಗಂಟೆಗೆ ಶ್ರೀ ವಾಯ್.ಎಚ್. ನಾಗೂರ, ಜಿಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಅಧ್ಯಕ್ಷತೆಯಲ್ಲಿ ನಡೆದ ಸಾಹಸ ಚಟುವಟಿಕೆಗಳ ಪ್ರದರ್ಶನವನ್ನು ಜೆ.ಎಸ್.ಎಸ್. ಶ್ರೀ ಮಂಜುನಾಥೇಶ್ವರ ಸ್ನಾತಕ ಮತ್ತು ಸ್ನಾತಕೋತ್ತರ ಸಂಸ್ಥೆಯ ಪ್ರಾಚಾರ್ಯರೂ ಹಾಗೂ ವಿತ್ತಾಧಿಕಾರಿಗಳು ಆದ ಸನ್ಮಾನ್ಯ ಡಾ. ಅಜಿತ್ ಪ್ರಸಾದ್ ಅವರು ಉದ್ಘಾಟನೆಯನ್ನು ಮಾಡಿ ಮಕ್ಕಳ ವಿವಿಧ ಸಾಹಸ ಚಟುವಟಿಕೆಗಳನ್ನು ನೋಡಿ ಸಂತೋಷಪಟ್ಟರಲ್ಲದೆ ಇಂತಹ ಚಟುವಟಿಕೆಗಳಿಂದ ಮಕ್ಕಳಲ್ಲಿ ಸಾಹಸದ ಪ್ರವೃತ್ತಿ ಹೆಚ್ಚಿಸುವುದೆಂದು ಹೇಳಿದರು.

**ಕೆಂಪು ಹೂವು ಮತ್ತು ಕಲರವ:** ಅದೇ ದಿನ ಸಂಜೆ 6.30 ಗಂಟೆಗೆ ಕೆಂಪು ಹೂವು ಮತ್ತು ಕಲರವ ಕಾರ್ಯಕ್ರಮವನ್ನು ಧಾರವಾಡ ರಂಗಾಯಣದ ಮಾಜಿ ನಿರ್ದೇಶಕರಾದ ಶ್ರೀ ಸುಭಾಷ್ ನರೇಂದ್ರ ಅವರು ಉದ್ಘಾಟಿಸಿದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ವಿ.ವಿ. ಕಟ್ಟಿ ಇವರು ಅಧ್ಯಕ್ಷತೆಯನ್ನು ವಹಿಸಿದರು.




**ಜಾನಪದ ಹಬ್ಬ:** ಜನವರಿ 21 ರಂದು ಸಂಜೆ 7.00 ಗಂಟೆಗೆ ನಡೆದ ಕಾರ್ಯಕ್ರಮದಲ್ಲಿ ಶಿಕ್ಷಣ ಇಲಾಖೆಯ ಅಪರ ಆಯುಕ್ತರ ಕಾರ್ಯಾಲಯದಲ್ಲಿ ಸಹ ನಿರ್ದೇಶಕರಾದ ಮಾನ್ಯ ಶ್ರೀ ಬಿ.ಕೆ.ಎಸ್. ವರ್ಧನ ಅವರು ಜಾನಪದ ಹಬ್ಬ ಕಾರ್ಯಕ್ರಮವನ್ನು ಉದ್ಘಾಟಿಸಿ ಜಾನಪದ ಹಾಡುಗಳನ್ನು ಹಾಡಿ ಮಕ್ಕಳೊಡನೆ ಸಂತೋಷಪಟ್ಟರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಹಿರಿಯ ಜಾನಪದ ಕಲಾವಿದೆಯರಾದ ಶ್ರೀಮತಿ ಪಾರ್ವತಿ ಹೊಂಗಲ ಇವರು ಅನೇಕ ಜಾನಪದ ಹಾಡುಗಳನ್ನು ಹಾಡಿದರು. ಹೋಟೆಲ್ ಒಡೆಯರ್ ಸಂಘದ ಅಧ್ಯಕ್ಷರಾದ ಮಾನ್ಯ ಶ್ರೀ ಮಹೇಶ ಶೆಟ್ಟಿಯವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಮಕ್ಕಳಿಗೆ ಹಿತವಚನ ನೀಡಿದರು. ನಂತರ ನಡೆದ ಜಾನಪದ ಕಾರ್ಯಕ್ರಮದಲ್ಲಿ ವಿವಿಧ ಜಿಲ್ಲೆಯ ಮಕ್ಕಳು ಆಕರ್ಷಕ ಜಾನಪದ ಚಟುವಟಿಕೆಗಳನ್ನು ಸಾದರಪಡಿಸಿದರು.






**ಸಮಾರೋಪ ಸಮಾರಂಭ:** ಜನವರಿ 22 ರಂದು ಸಂಜೆ 4.00 ಗಂಟೆಗೆ ಶ್ರೀ ಮಂಜುನಾಥೇಶ್ವರ ಪ್ರೌಢಶಾಲೆಯ ಪ್ರಾಚಾರ್ಯರಾದ ಶ್ರೀಮತಿ ರಜನಿದಾಸರವರ ಅಧ್ಯಕ್ಷತೆಯಲ್ಲಿ ನಡೆದ ಸಮಾರೋಪ ಸಮಾರಂಭದಲ್ಲಿ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಾದ ಶ್ರೀಮತಿ ಆರ್. ಸ್ನೇಹಲ್ ಹಾಗೂ ಧಾರವಾಡ ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳಾದ ಶ್ರೀಮತಿ ಸಂಗೀತಾ ಜಿ. ಇವರು ಭಾಗವಹಿಸಿ ಮಕ್ಕಳೊಡನೆ ಸಂವಾದ ನಡೆಸಿದರು. ನಂತರ ನಡೆದ ಕಬ್ ಮಾಸ್ಟರ್ ಮತ್ತು ಪ್ಲಾಕ್ ಲೀಡರುಗಳ ಶಿಬಿರಾಗ್ನಿ ಕಾರ್ಯಕ್ರಮದಲ್ಲಿ ವಿವಿಧ ಜಿಲ್ಲೆಗಳಿಂದ ಬಂದ ಶಿಕ್ಷಕ–ಶಿಕ್ಷಕಿಯರು ವೈವಿಧ್ಯಮಯ ಚಟುವಟಿಕೆಗಳನ್ನು ಸಾದರಪಡಿಸಿದರು.

**ಸರ್ವಧರ್ಮ ಸಮನ್ವಯ ಪ್ರಾರ್ಥನೆ:** ಜನವರಿ 23 ರಂದು ಬೆಳಿಗ್ಗೆ 7.30 ಗಂಟೆಗೆ ಸರ್ವಧರ್ಮ ಸಮನ್ವಯ ಪ್ರಾರ್ಥನೆ ನಡೆಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆಯವರು ಶುಭಾಶಯ ಹೇಳಿದರು. ಧ್ವಜಾವರೋಹಣದ ನಂತರ ಉತ್ಸವ ಮುಕ್ತಾಯಗೊಂಡಿತು.

# Founders Day & Thinking Day Celebrated on 22.02.2018

The Bharat Scouts and Guides, Karnataka organized **"Founders Day and Thinking Day"** on February 22nd at Bengaluru. More than 200 Bunnys. Cubs-Bulbuls, Scouts-Guiders, Rovers-Rangers participated in the Peace March. The Peace March was Flagged off by Sri Mohan Kumar Kondajji, Hon'ble Member of Karnataka Legislative Council and Headquarters Commissioner (Scouts) for Projects, Bharat Scouts-Guides, Karnataka and he conveyed greetings to all the participants on the occasion of 161st Birthday of B.P. and 129 Birthday of Mrs. Olave Lady Baden Powell which is celebrated all over the World as Founders Day and Thinking Day. The Special Message of this Year is **"Impact for the Girl Guides and Girl Scouts is all about bringing Positive Change".**




Peace March Rally started from Town Hall to Hudson Circle and finally reached the Cubbon Park along with Band Party, holding the placard of Lord Baden Powell and Mrs. Olave lady Baden Powell's Messages and Posters of activities and Programmes

A Motivating Programme was presented to the participants by Mr. T.S. Lucas, Former Executive Director of National Headquarters and Former State Commissioner (Scout) of Karnataka. Sri Kondajji B. Shanmukhappa, Vice-President of Bharat Scouts and Guides, Karnataka who presided over the programme nenewed the Scout and Guide PROMISE and addressed the gathering. Sri K. Gangappa Gowda, Joint State Secretary (Scouts), Smt. Prema Vincent, Former District Commissioner (Guides) of KGF and Mr. Vincent, Vice-President KGF Local Association and Sri Sampath Kumar, ADC(S), & Smt. Rajeswari, ADC(G) of Banaswadi Local Association, Smt. B.D.

Shantha, Smt. B. Revathi, ASC(G) of Karnataka and Smt. C. Manjula, State Org. Commissioner (Guides) Smt. K.V. Shamala, State Trg. Commissioner (G) were part of this programme.The Rangers of Maharani's Science College, Bandset of Issac Newton School, Bulbuls of MES School of Yelahanka and Scouts and Guides of Stracy Memorial School, Bunnies of Shanthi Children's High School and Holy Angels Higher Primary School & Few Rovers participated in the Route March. The Programme was organized by Smt. B. Revathi, ASC(G) & Miss. Krupa Vijay, ALT(G) of Shivajinagar Local Association with the support of State Headquarters.



## ನನ್ನ ಸಾಲುಗಳು ಶಿಬಿರದ ಮೇಲೆ

– ಜಿ.ಎಂ. ರಾಜಶೇಖರ

ನಕ್ಷೆ ತಯಾರಿಕೆ & ನಕ್ಷತ್ರ ವೀಕ್ಷಣೆ ಶಿಬಿರಾರ್ಥಿ, ಬಳ್ಳಾರಿ ಜಿಲ್ಲೆ

ನಾ ಬರೆದ ಸಾಲುಗಳ
ಈ ಶಿಬಿರದ ಮೇಲೆ
ಆಲಿಸಿ ನಿಮ್ಮಯ ಕಿವಿಗಳಲಿ
ಇದು ನನ್ನ ಮನದ ಓಲೆ

ನುರಿತ ತರಬೇತಿದಾರರು
ಶಿಬಿರಾರ್ಥಿಗಳೊಂದಿಗೆ ಬೆರೆತರು
ಸುಂದರ ಪರಿಸರದ ನಡುವೆ
ಜ್ಞಾನ ಸುಧೆಯ ಉಣಬಡಿಸಿದರು.

ಇರುಳಿನ ಚುಕ್ಕಿಗಳಲ್ಲಿ ಚಿತ್ರ
ತೋರಿಸಿ ಕಥೆ ಹೇಳಿ ಅದ್ಭುತವನೆ ತೋರಿದರು
ಭೂತಾಯಿಯ ತಮ್ಮ ಚಂದಮಾಮ
ಕೆಂಪಾದುದ ತೋರಿಸಿ ಗ್ರಹಣದ
ಮೂಢನಂಬಿಕೆಯನ್ನೇ ಕಳೆದರು
ಮೊಬೈಲ್ ತಾರಾಲಯ ತೋರಿಸಿದ
ಸತೀಷ್‌ರು ಮನವನೆಲ್ಲಾ ತಣಿಸಿದರು.

ಬೆಳಗಿನ ವ್ಯಾಯಾಮ ನಂತರದ ತಿಂಡಿ
ಮಧ್ಯಾಹ್ನ, ರಾತ್ರಿ ಊಟ, ಶಕ್ತಿಯನ್ನು ನೀಡಿರಲು
ಬಂದ ಊರು ಕೇರಿ ಮರೆತು
ಶಿಬಿರದಲಿ ನೋವನ್ನೆಲ್ಲಾ ಮರೆತರು.

ನಿಸ್ವಾರ್ಥತೆಯ ಹರಿಕಾರ ಬೇಡನ್ ಪಾವೆಲ್‌ರು
ಸೇವೆಗೆ ವಯಸ್ಸಿನ ತಾರತಮ್ಯ ಇಲ್ಲವೆಂದು ಸಾರಿದರು
ಹಿರಿಯರಿಂದ ಇಲ್ಲಿ ಸರಳ ಸಹಜ
ಸುಂದರ ಬಾಳ್ವ ಅಂಶಗಳ ಕಲಿತೆ

ಸೇವೆಯ ಪ್ರತಿಫಲ ಸೇವೆಯೇ
ಎಂದು ನಿಸ್ವಾರ್ಥ ಸೇವೆಯ ಅರಿತೆ
ಮಾಪನಗಳೇ ಇಲ್ಲ ಅಳತೆ
ಇತಿ ಮಿತಿಗಳ ಅಂದಾಜಿನಲ್ಲಿ ನಕಾಶೆಗಳ ರಚನೆ

ದೃಷ್ಟಿ, ಬೆಳಕು, ನೆರಳಿಂದ ಕಲಿತ ಅಳತೆ
ಸೋಜಿಗ, ಬೇಸ್ ಗಳಲ್ಲಂತು ಕೌತುಕದ ಚಲನೆ
ಹಿರಿಯ ನಾಗರೀಕರಲ್ಲೂ ಕೂಡ ಯುವ
ಶಕ್ತಿಯ ಚಿಲುಮೆ ಕಂಡೆವು

ಸಮರ್ಥ, ನಿಸ್ವಾರ್ಥ, ಸೇವೆ ಮಾಡುವ
ಅವಕಾಶ ಇಲ್ಲಿ ಪಡೆದೆವು.
ನನ್ನ ಜೀವನ ನನ್ನ ಸಂದೇಶ
ಎಂದ ಗಾಂಧೀಜಿ ನಾಡಿನ ಜನ
ಮಾನಸಕೆ ಅರ್ಪಿಸಿ ನಾ ಬರೆದ
ಸಾಲುಗಳ ಸಿದ್ಧನಾಗಿ ಸೇವೆಗೆ
ಈ ಶಿಬಿರದಮೇಲೆ ನಾ ಬರೆದ ಸಾಲು



# ರಾಷ್ಟ್ರಮಟ್ಟದ ರೋವರ್-ರೇಂಜರ್ ಸೇವಾ ಶಿಬಿರ

"ಸ್ವಯಂ ಸೇವೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಲು ವಯಸ್ಸಿಗಿಂತ ಮನಸ್ಸು ಮುಖ್ಯ" ಎಂದು ಸ್ವಸ್ತಿಶ್ರೀ ಚಾರುಕೀರ್ತಿ ಭಟ್ಟಾರಕ ಸ್ವಾಮೀಜಿ ಅಭಿಪ್ರಾಯಪಟ್ಟರು

ಅವರು ಜೈನಕಾಶಿ ಶ್ರವಣಬೆಳಗೊಳದಲ್ಲಿ ಮಹಾಮಸ್ತಕಾಭಿಷೇಕ ಅಂಗವಾಗಿ ನಿರ್ಮಾಣಗೊಂಡಿರುವ ಸ್ವಯಂ ಸೇವಾ ನಗರದ ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಹಾಗೂ ಹಾಸನ ಜಿಲ್ಲಾ ಸ್ಕೌಟ್ಸ್ - ಗೈಡ್ಸ್ ಸಂಯುಕ್ತಾಶ್ರಯದಲ್ಲಿ ಆಯೋಜಿಸಿದ್ದ ರಾಷ್ಟ್ರಮಟ್ಟದ ಸೇವಾ ಶಿಬಿರವನ್ನು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಾತನಾಡಿದರು.



ಜಿಲ್ಲಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀಮತಿ ರೋಹಿಣಿ ಸಿಂಧೂರಿ ದಾಸರಿ ಮಾತನಾಡಿ ಶಿಬಿರಾರ್ಥಿಗಳು ಮಹೋತ್ಸವದಲ್ಲಿ ಪಾಲ್ಗೊಂಡು ಸೇವೆ ಸಲ್ಲಿಸುವುದರಿಂದ ಮಹೋತ್ಸವಕ್ಕೆ ಆಗಮಿಸುವ ಯಾತ್ರಾರ್ಥಿಗಳು ಹಾಗೂ ಜನಸಾಮಾನ್ಯರಿಗೆ ಹೆಚ್ಚಿನ ಅನುಕೂಲವಾಗಲಿದೆ. ಸದ್ಯ 250 ಶಿಬಿರಾರ್ಥಿಗಳು ಆಗಮಿಸಿದ್ದು, ರಾಜ್ಯ ಹಾಗೂ ರಾಷ್ಟ್ರದ ವಿವಿಧ ಭಾಗಗಳಿಂದ ಸುಮಾರು 3000 ಕ್ಕೂ ಹೆಚ್ಚು ಶಿಬಿರಾರ್ಥಿಗಳು ಆಗಮಿಸಲಿದ್ದಾರೆ. ಸದ್ಯ 12 ಭಾಗಗಳಲ್ಲಿ ನಿರ್ಮಾಣವಾಗಿರುವ ಉಪನಗರಗಳ ಮಾಹಿತಿ ಪಡೆದುಕೊಂಡು ಬರುವ ಪ್ರವಾಸಿಗರಿಗೆ ಅನುಕೂಲವಾಗುವಂತೆ ಕಾರ್ಯನಿರ್ವಹಿಸಬೇಕಿದೆ ಎಂದು ಸಲಹೆ ನೀಡಿದರು.

ಭಾರತ್ ಸ್ಕೌಟ್ಸ್-ಗೈಡ್ಸ್‌ನ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಮಾತನಾಡಿ ರಾಜ್ಯಮಟ್ಟದಲ್ಲಿ ನೂರಾರು ಸ್ವಯಂ ಸೇವಾ ಸಂಸ್ಥೆಗಳಿದ್ದರೂ ಮಹಾಮಸ್ತಕಾಭಿಷೇಕ ಸಮಿತಿ, ಹಾಸನ ಜಿಲ್ಲಾಡಳಿತ ಜಿಲ್ಲಾ ಉಸ್ತುವಾರಿ ಮಂತ್ರಿಗಳು, ಈ ಸಮಿತಿಯ ವಿಶೇಷಾಧಿಕರಿಗಳು, ಸ್ಥಳೀಯ ಶಾಸಕರು ನಮ್ಮ ಸ್ಕೌಟ್ ಸಂಸ್ಥೆಗೆ ಸುಯೋಗ ಒದಗಿಸಿ ಕೊಟ್ಟಿದ್ದಾರೆ. ನಾವು ಬಹಳ ಹಿಂದಿನಿಂದಲೂ ಮಹಾಮಸ್ತಕಾಭಿಷೇಕದಲ್ಲಿ ಸೇವಾ ಕಾರ್ಯವನ್ನು ಮಾಡುತ್ತಾ



ಬಂದಿದ್ದೇವೆ. ಶಿಸ್ತು, ತ್ಯಾಗ, ಬದ್ಧತೆ ಸ್ಕೌಟ್ಸ್‌ನ ಮುಖ್ಯ ಗುರಿ. ಪ್ರತಿ ಜಿಲ್ಲೆಯಲ್ಲೂ ರೋವರ್ಸ್-ರೇಂಜರ್ಸ್‌ಗಳು ವಿಪತ್ತು ನಿರ್ವಹಣಾ ಸಮಿತಿಗಳಿರಬೇಕು ಎಂದರು.

ಶ್ರವಣಬೆಳಗೊಳ ಕ್ಷೇತ್ರದ ಶಾಸಕರಾದ ಶ್ರೀ ಸಿ.ಎನ್. ಬಾಲಕೃಷ್ಣ ಮಾತನಾಡಿ ಮಹಾಮಸ್ತಕಾಭಿಷೇಕದಂತಹ ಮಹತ್ವದ ಕಾರ್ಯಕ್ರಮದಲ್ಲಿ ಕಾಯಕ ಮಾಡುವ ಪುಣ್ಯ ಸ್ಕೌಟ್ಸ್ ಸಂಸ್ಥೆಯದ್ದಾದರೆ ನಿಸ್ವಾರ್ಥ ಸೇವೆ ನಮಗೆ ವರದಾನವಾಗಿದೆ. ಇಲ್ಲಿನ ಮಕ್ಕಳಿಂದ ಬಹು ಮಟ್ಟದ ಸೇವಾ ನಿರೀಕ್ಷೆ ನಮಗಿದೆ. ಎಂದರು.

ವಿಧಾನಪರಿಷತ್ ಸದಸ್ಯರಾದ ಶ್ರೀ ಎಂ.ಎ. ಗೋಪಾಲಸ್ವಾಮಿ ಮಾತನಾಡಿ ಸ್ಕೌಟ್ಸ್-ಗೈಡ್ಸ್‌ಗಳಿಂದ ಮಹಾಮಸ್ತಕಾಭಿಷೇಕಕ್ಕೆ ಬಲಬಂದಂತಾಗಿದೆ. ಸೇವೆ ಮಾಡುವಾಗ ಚಿತ್ತ ಕದಲಿಸಬಾರದು. ಶ್ರದ್ಧೆ, ಆಸಕ್ತಿಯಿಂದ ಮಾಡಬೇಕೆಂದರು.

ಚನ್ನರಾಯಪಟ್ಟಣ ತಾಲ್ಲೂಕಿನ ಕ್ಷೇತ್ರಶಿಕ್ಷಣಾಧಿಕಾರಿಗಳಾದ ಶ್ರೀಮತಿ ಎಚ್.ಕೆ. ಪುಷ್ಪಲತಾ ಮಾತನಾಡಿ ಶ್ರವಣಬೆಳಗೊಳ ಕ್ಷೇತ್ರದಲ್ಲಿ ಸೇವೆ ಮಾಡುವ ಅವಕಾಶ ಸಿಕ್ಕಿರುವುದು ಸ್ಕೌಟ್ಸ್ – ಗೈಡ್ಸ್ ಮಕ್ಕಳಿಗೆ ಪೂರ್ವಜನ್ಮದ ಸುಕೃತ. ರಾಷ್ಟ್ರಮಟ್ಟದ ಅನೇಕ ಅವಘಡಗಳಾದಾಗ ಸ್ಕೌಟ್ಸ್ ಸಂಸ್ಥೆಯ ಮಕ್ಕಳು ಸದಾ ಸೇವೆಯಲ್ಲಿ ಮುಂದಿರುವುದನ್ನು ಕಾಣುತ್ತೇವೆ ಎಂದರು.



ಹಾಸನ ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪನವರು ಮಾತನಾಡಿ ಸೇವೆಯಲ್ಲಿ ಚಂಚಲತೆ ಇರದೇ ಏಕಚಿತ್ತವಾಗಿರಬೇಕು. ಜನರ ನಿರೀಕ್ಷೆಗೆ ತಕ್ಕಂತೆ ವರ್ತಿಸಬೇಕು. ಕಾಯಕದಲ್ಲಿ ಕಳ್ಳಾಟವಿರಬಾರದು ಎಂದರು.

ಈ ಕಾರ್ಯಕ್ರಮದಲ್ಲಿ ರಾಜ್ಯ ಕಾರ್ಯದರ್ಶಿ ಶ್ರೀ ಚಿನ್ನಸ್ವಾಮಿರೆಡ್ಡಿ, ಜಿಲ್ಲಾ ಸ್ಕೌಟ್ಸ್ ಆಯುಕ್ತರಾದ ಶ್ರೀ ಪ್ರಕಾಶ್‌ಯಾಜಿ, ಗೈಡ್ ಆಯುಕ್ತರಾದ ಶ್ರೀಮತಿ ಎಂ.ಬಿ. ಗಿರಿಜಾಂಬಿಕ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ಆರ್.ಜಿ. ಗಿರೀಶ್ ಸೇರಿದಂತೆ ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಜರಿದ್ದರು.

## ರಾಷ್ಟ್ರೀಯ ಸೇವಾ ಶಿಬಿರ

ಫೆಬ್ರವರಿ 4 ರಿಂದ ಮಾರ್ಚ್ 3, 2018 ವರೆಗೆ ಹಾಸನ ಜಿಲ್ಲೆ, ಶ್ರವಣಬೆಳಗೊಳದಲ್ಲಿ ಜರುಗಿದ ಮಹಾಮಸ್ತಕಾಭಿಷೇಕ ಸೇವಾ ಶಿಬಿರದಲ್ಲಿ ಭಾಗವಹಿಸಿದ ರೋವರ್ಸ್ – ರೇಂಜರ್ಸ್, ಸ್ಕೌಟರ್ಸ್-ಗೈಡರ್ಸ್‌ಗಳಲ್ಲಿ ಮನವಿ. ದಯವಿಟ್ಟು ಶಿಬಿರದ ನಿಮ್ಮ ಅನುಭವಗಳನ್ನು 300 ಪದಗಳಿಗೆ ಮೀರದಂತೆ ನಮ್ಮ ಓದುಗರೊಂದಿಗೆ ಹಂಚಿಕೊಳ್ಳಿ. ಲೇಖನವು ಕನ್ನಡ ಅಥವಾ ಇಂಗ್ಲೀಷ್ ಭಾಷೆಯಲ್ಲಿ ಇರಲಿ.

– ಸಂಪಾದಕ ಮಂಡಳಿ

# ಜಿಲ್ಲಾ ವಾರ್ತೆಗಳು

## Bengaluru North

Shivajinagar Local Association organised Annual Rally on January 13th at R.T.C. Girls Higher Primary School, St. Joseph's Convent, Fracer Town, Bengaluru.

The Rally was Inaugurated by Sri P.G.R. Sindhia, State Chief Commissioner, BS&G Karnataka. Cubs, Bulbuls Guides and Bunnies from Shanthi Children School & Holy Angel's Higher Primary School participated in the Rally. Sri T.S. Lucas, L.T.(S), Sri. Sagaya Mary, H.M. of R.T.C. School, Mr. Krubhanandhan ADC(S) & Principal of Stracy Memory Composite College and Mr. Kanaka Latha, Princpal of Shanthi Children School participated in the Rally. Sri Celeria was the Chief Guest of the Valedictory Function.

The Rally was co-ordinated by Smt. B. Revathy, L.T.(B) & Asst. State Commissioner (G) Karnataka.

## ಬೆಳಗಾವಿ

ಜನವರಿ 24 ರಂದು ಸರ್ಕಾರಿ ಸ್ವತಂತ್ರ ಪದವಿ ಪೂರ್ವಕಾಲೇಜ್, ಗೋವಿನ ಕೊಪ್ಪದ "ಲಾಲ್ ಬಹದ್ದೂರ್ ಶಾಸ್ತ್ರಿ" ಘಟಕದ ವತಿಯಿಂದ ರಾಷ್ಟ್ರೀಯ ಮತದಾರರ ಜಾಗೃತಿ ಕಾರ್ಯಕ್ರಮವನ್ನು ಆಚರಿಸಲಾಯಿತು. ವಿದ್ಯಾರ್ಥಿಗಳಿಗೆ ದೇಶದ ಸಾರ್ವಭೌಮತ್ವವನ್ನು ಕಾಪಾಡಿಕೊಳ್ಳುವ ಪ್ರತಿಜ್ಞಾ ವಿಧಿಯನ್ನು ಭೋದಿಸಲಾಯಿತು. ಸಭೆಯ ಅಧ್ಯಕ್ಷತೆಯನ್ನು ಸ್ಕೌಟ್-ಗೈಡ್ಸ್‌ನ ಸಂಚಾಲಕರಾದ ಶ್ರೀ ಪ್ರಕಾಶ್. ವ್ಹಿ. ಪಾಟೀಲರು ವಹಿಸಿದ್ದರು. ಉಪನ್ಯಾಸಕಾರದ ಶ್ರೀ ಎಂ.ಬಿ ಚಲವಾದಿ ಕಾರ್ಯಕ್ರಮವನ್ನು ನಿರೂಪಿಸಿದರು. ಶ್ರೀ ಆರ್.ಎಸ್. ಕರವೀನಕೊಪ್ಪ ಇವರು ವಂದಿಸಿದರು.



* ಜನವರಿ 26 ರಂದು 69ನೇ ಗಣರಾಜ್ಯೋತ್ಸವ ದಿನಾಚರಣೆ ನಿಮಿತ್ತ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿಯಲ್ಲಿ ಧ್ವಜಾರೋಹಣ ಸಮಾರಂಭವು ಜರುಗಿತು. ಧ್ವಜಾರೋಹಣವನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ ನೆರವೇರಿಸಿದರು. ಸಲಹಾಮಂಡಳಿ ಸದಸ್ಯರಾದ ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಸಂಘಟಕರಾದ ಶ್ರೀ ಡಿ.ಬಿ. ಅತ್ತಾರ, ಶ್ರೀ ವಿಠ್ಠಲ ಎಸ್. ಬಾಚಗುಂಡಿ ಹಾಗೂ ಕ.ಕಿ.ಪ್ರಾ. ಶಾಲೆ ನಂ. 20ರ 50 ಕಬ್-ಬುಲ್‌ಬುಲ್‌ಗಳು ಉಪಸ್ಥಿತರಿದ್ದರು.

ಜಿಲ್ಲಾ ಕ್ರೀಡಾಂಗಣದಲ್ಲಿ ಜರುಗಿದ ಸಾಮೂಹಿಕ ಪಥಸಂಚಲನದಲ್ಲಿ ನಾಲ್ಕು ಸ್ಕೌಟ್-ಗೈಡ್ ತಂಡಗಳು ಭಾಗವಹಿಸಿದ್ದವು. ಇವುಗಳಲ್ಲಿ ವನಿತಾ ವಿದ್ಯಾಲಯದ ಗೈಡ್ ತಂಡ ದ್ವಿತೀಯ ಸ್ಥಾನವನ್ನು ಪಡೆದುಕೊಂಡು ಜಿಲ್ಲಾ ಸಂಸ್ಥೆಗೆ ಕೀರ್ತಿ ತಂದಿದೆ. ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರಾದ ಮಾನ್ಯಶ್ರೀ ರಮೇಶ. ಲ. ಜಾರಕಿಹೋಳಿ, ಸಂಸದರಾದ ಮಾನ್ಯ ಶ್ರೀ ಸುರೇಶ ಅಂಗಡಿ, ಜಿಲ್ಲಾ ಪಂಚಾಯತ ಅಧ್ಯಕ್ಷರಾದ ಶ್ರೀಮತಿ ಆಶಾ ಪ್ರ. ಐಹೊಳೆ, ಜಿಲ್ಲಾಧಿಕಾರಿ ಶ್ರೀ ಎಸ್. ಜಿಯೊವುಲ್ಲಾ ಉಪಸ್ಥಿತರಿದ್ದರು. ಹಾಗು ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

* 69ನೇ ಗಣರಾಜ್ಯೋತ್ಸವದ ನಿಮಿತ್ತ ಚಿಕ್ಕೋಡಿಯಲ್ಲಿ ಆರ್.ಡಿ. ಶಾಲಾ ಆವರಣದಲ್ಲಿ ಜರುಗಿದ ಸಾಮೂಹಿಕ ಧ್ವಜಾರೋಹಣ ಮತ್ತು ಪಥಸಂಚಲನದಲ್ಲಿ ಸ್ಥಳೀಯ 16 ಸ್ಕೌಟ್-ಗೈಡ್ ತಂಡಗಳು ಭಾಗವಹಿಸಿದ್ದವು. ಇವುಗಳಲ್ಲಿ ಆರ್.ಡಿ. ಶಾಲೆಯ ಗೈಡ್ ತಂಡ ಪ್ರಥಮಹಾಗೂ ಸ.ಕ.ಹಿ.ಪ್ರಾ.ಶಾಲೆ ಗಾಂಧಿ ಮಾರ್ಕೆಟ್ ಚಿಕ್ಕೋಡಿಯ ಗೈಡ್ ತಂಡ ಪ್ರಥಮ ಹಾಗೂ ಸ.ಕ.ಹಿ.ಪ್ರಾ. ಶಾಲೆ, ಗಾಂಧಿ ಮಾರ್ಕೆಟ್ ಚಿಕ್ಕೋಡಿಯ ಗೈಡ್ ತಂಡ ದ್ವಿತೀಯ ಸ್ಥಾನ ಪಡೆದುಕೊಂಡಿದೆ.

ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಮಾನ್ಯ ಸಂಸದರಾದ ಶ್ರೀ ಪ್ರಕಾಶ ಹುಕ್ಕೇರಿ, ಮಾನ್ಯ ಶಾಸಕರಾದ ಶ್ರೀ ಗಣೇಶ ಹುಕ್ಕೇರಿ, ಚಿಕ್ಕೋಡಿ ಉಪವಿಭಾಗಾಧಿಕಾರಿಗಳಾದ ಶ್ರೀಮತಿ ಗೀತಾ ಕೌರ, ತಹಶೀಲ್ದಾರ, ಶ್ರೀ ಕುಲಕರ್ಣಿ ಉಪನಿರ್ದೇಶಕರಾದ ಶ್ರೀ ರಾಜೀವ ವಿ. ನಾಯಕ, ಬಿ.ಇ.ಓ., ಶ್ರೀ ಶ್ರೀಪತಿ ತಾಲ್ಲೂಕು ಪಂಚಾಯತ ಕಾರ್ಯ ನಿರ್ವಾಹಕ ಅಧಿಕಾರಿಗಳಾದ ಶ್ರೀ ವಿ.ಬಿ. ಪಾಟೀಲ, ತಾ.ಪಂ. ಅಧ್ಯಕ್ಷರಾದ ಶ್ರೀಮತಿ ಉರ್ಮಿಳಾ ಪಾಟೀಲ ಪುರಸಭೆ ಅಧ್ಯಕ್ಷಾದ ಶ್ರೀ ಆರ್.ಕೆ. ಮುಂಡೆ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಂ.ಕೆ. ಪಾರ್ಥನಹಳ್ಳಿ, ಕಾರ್ಯದರ್ಶಿ ಶ್ರೀ ಎನ್.ಜಿ. ಪಾಟೀಲ ಉಪಸ್ಥಿತರಿದ್ದರು.



* ಫೆಬ್ರವರಿ 14 ರಂದು ಕೆ.ಎಲ್.ಇ.ಎಮ್.ಎಮ್. ಆಂಗ್ಲ ಮಾಧ್ಯಮ ಶಾಲೆಯ 'ಸ್ವಾಮಿ ವಿವೇಕಾನಂದ' ಕಬ್ಸ್ ಪ್ಯಾಕ್ ಇವರ ಆಶ್ರಯದಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ ನಗರದ ಪಕ್ಕದಲ್ಲಿರುವ ಘಟಪ್ರಭಾ ನದಿಯ ತಟದಲ್ಲಿಯ ತಪ್ಪಲು ಪ್ರದೇಶದಲ್ಲಿ ಕಬ್ಸ್‌ಗಳಿಗಾಗಿ ಸಾಹಸಮಯ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ ಕಬ್ ಮಾಸ್ಟರ್ ಶ್ರೀಮತಿ ಚೇತನಾ ಪಾಟೀಲ ಹಾಗು ಫ್ಲಾಕ್ ಲೀಡರ್ ಶ್ರೀಮತಿ ನಂದಾದೀಪಾ ಪವಾರ ಉಪಸ್ಥಿತರಿದ್ದು ಸ್ಕೌಟ್-ಗೈಡ್‌ಗಳಿಗೆ ಧೈರ್ಯ, ಪರಸ್ಪರ ಸಹಕಾರ, ಎಂಥದೇ ಸಂದರ್ಭಗಳಲ್ಲಿಯೂ ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳುವ ಗುಣಗಳನ್ನು ಮಕ್ಕಳು ಈ ಶಿಬಿರದಿಂದ ರೂಢಿಸಿಕೊಂಡರು. ಶಿಬಿರದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ ಅವರು ಉಪಸ್ಥಿತರಿದ್ದು ಮಕ್ಕಳಿಗೆ ಸಲಹೆ, ಮಾರ್ಗದರ್ಶನ ನೀಡಿದರು.



## ಬೀದರ್



ಫೆಬ್ರವರಿ 9 ರಿಂದ 11 ರ ವರೆಗೆ ನಡೆದ ಬಸವ ಉತ್ಸವದಲ್ಲಿ ಶ್ರೀ ಬಸವೇಶ್ವರ ಸ್ಕೌಟ್ಸ್-ಗೈಡ್ಸ್ ಮುಕ್ತದಳ ಬಸವಕಲ್ಯಾಣ ವತಿಯಿಂದ ವಸ್ತು ಪ್ರದರ್ಶನ ಮಾಡಲಾಯಿತು. ಸ್ಕೌಟ್ಸ್ ಮತ್ತು ಗೈಡ್ಸ್ ಇದರ ಮಹತ್ವವನ್ನು ಜನರಿಗೆ ತಿಳಿಸಲಾಯಿತು. ವಸ್ತು ಪ್ರದರ್ಶನಕ್ಕೆ ಶಾಸಕರಾದ ಶ್ರೀ ಮಲ್ಲಿಕಾರ್ಜುನ ಎಸ್. ಖೂಬಾ ಬೇಟಿ ನೀಡಿದರು. ಜೊತೆಗೆ ಶ್ರೀ ಬಾಬು ಹೊನ್ನಾಯಕ, ಕಾಂಗ್ರೆಸ್ ಮುಖಂಡರು, ಬಸವಕಲ್ಯಾಣ, ನಾಡ ತಹಸಿಲ್ದಾರರು ಶ್ರೀ ಶಿವಾನಂದ ಮೇತ್ರೆ, ಶ್ರೀ ಕಾಶಿನಾಂತ ಎ.ಎಸ್.ಐ. ಪೋಲೀಸ್ ಠಾಣೆ, ಬಸವಕಲ್ಯಾಣ, ಅಕ್ಕ ಅನ್ನಪೂರ್ಣಾ ಬಸವ ಸೇವಾ ಪ್ರತಿಷ್ಠಾನ ಬೀದರ ಹಾಗೂ ಅಕ್ಕ ಗಂಗಾಂಬಿಕ ಹರಳಯ್ಯ ಮಠ, ಬಸವಕಲ್ಯಾಣ ಹಾಗೂ ಕಲ್ಯಾಣರಾವ ಚಳಕಾಪೂರೆ ಡಿ.ಓ.ಸಿ. ಬೀದರ ಇತತರು ಶ್ರೀಬಸವೇಶ್ವರ ಭಾರತ್ ಸ್ಕೌಟ್ಸ್-ಗೈಡ್ಸ್ ವಸ್ತು ಪ್ರದರ್ಶನಕ್ಕೆ ಭೇಟಿ ನೀಡಿ ಆನಂದ ವ್ಯಕ್ತಪಡಿಸಿದರು ಹಾಗೂ ಅನೇಕ ಪಾಲಕರು ತಮ್ಮ ಮಕ್ಕಳನ್ನು ಸ್ಕೌಟ್-ಗೈಡ್‌ಗೆ ಸೇರಿಸಿಕೊಳ್ಳಲು ವಿನಂತಿ ಮಾಡಿದರು. ಸಂಚಾಲಕರು ಶ್ರೀ ಅನಿಲಕುಮಾರ ಶಾಸ್ತ್ರಿ, ಕಾರ್ಯದರ್ಶಿ ಮತ್ತು ಅಧ್ಯಕ್ಷರು ಶ್ರೀ ಬಸವೇಶ್ವರ ಭಾರತ್ ಸ್ಕೌಟ್ಸ್-ಗೈಡ್ಸ್ ಶ್ರೀ ಎಜಾಜ ಪಟೇಲ ಹಾಗೂ ಸಂದೀಪನಾ ಗಾಯಕವಾಡ, ಬಸವರಾಜ, ಮಾರುತಿ ಬೇಂದ್ರೆ, ಹೀರಕನಬಾಯಿ, ರೋಹಿದಾಸ ಮಾಲೆ, ಗುಲಾಬ, ಶೇಶಿಕಲಾ, ಶರಣಬಸಪ್ಪಾ ಬಿರಾದಾರ. ಸ್ಕೌಟ್-ಗೈಡ್ ಬಗ್ಗೆ ಜನರಿಗೆ ಮಹತ್ವವನ್ನು ತಿಳಿಸಿದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ಶ್ರೀ ಸಿ. ನಾಗರಾಜರವರು ವಸ್ತು ಪ್ರದರ್ಶನಕ್ಕೆ ಪ್ರೋತ್ಸಾಹ ನೀಡಿದರು.



## ಚಿತ್ರದುರ್ಗ

ಜನವರಿ 26 ರಂದು ಡಾ॥ ಬಿ.ಆರ್. ಅಂಬೇಡ್ಕರ್ ರವರ ಭಾವಚಿತ್ರ ಪೂಜೆಯೊಂದಿಗೆ 69ನೇ ಗಣರಾಜ್ಯೋತ್ಸವವನ್ನು ಆಚರಿಸಲಾಯಿತು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್, ಜಿಲ್ಲಾ ಆಯುಕ್ತರು(ಗೈಡ್ಸ್) ರವರು ರಾಷ್ಟ್ರಧ್ವಜಾರೋಹಣ ಮಾಡಿದರು. ಡಾ॥ ರಹಮತ್ ಉಲ್ಲಾ, ಜಿಲ್ಲಾ ಪ್ರಭಾರಿ ಆಯುಕ್ತರು (ಸ್ಕೌಟ್ಸ್) ಇವರು ಮಾತನಾಡಿ ನಮ್ಮ ಸಂವಿಧಾನ ಶಿಲ್ಪಿ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ರವರು ಉತ್ತಮ ರಾಷ್ಟ್ರ ನಾಯಕರು ಅವರು ನಮಗೆ ಉತ್ತಮ ಸಂವಿಧಾನವನ್ನು ರಚಿಸಿಕೊಟ್ಟಿದ್ದಾರೆ ಎಂದು ನುಡಿದರು. ಈ ಸಂದರ್ಭದಲ್ಲಿ ಶ್ರೀ ಎಂ.ಆರ್. ನಾರಾಯಣಪ್ಪ, ಉಪಾಧ್ಯಕ್ಷರು, ಶ್ರೀ ಸಿ.ಆರ್. ಮೊಹಮ್ಮದ್ ಮೊಹಿನುದ್ದೀನ್ ಎ.ಡಿ.ಸಿ.(ಸ್ಕೌಟ್ಸ್), ಶ್ರೀ ಪರಮೇಶ್ವರ, ಆಜೀವ ಸದಸ್ಯರು, ಶ್ರೀ ಜನಾರ್ಧನರೆಡ್ಡಿ, ಎ.ಡಿ.ಸಿ.(ಸ್ಕೌಟ್ಸ್), ಶ್ರೀಮತಿ ವೀಣಾ ವಿಜಯ್, ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಶ್ರೀಮತಿ ಪದ್ಮಾವತಿ ಡಿ. ಹಾಗೂ ಶ್ರೀ ಹೊನ್ನಪ್ಪ, ಉಪಸ್ಥಿತರಿದ್ದರು. ಶ್ರೀ ಬಿ. ಗುರುಮೂರ್ತಿ. ಜಿಲ್ಲಾ ಸಂಘಟಕರು ಎಲ್ಲರಿಗೂ ವಂದಿಸಿದರು.



# ಚಿಕ್ಕಬಳ್ಳಾಪುರ



ಜನವರಿ 30 ರಿಂದ 31ರ ವರೆಗೆ ಶಿಡ್ಲಘಟ್ಟ ತಾಲ್ಲೂಕಿನ ಕ್ಷೇತ್ರ ಸಂಪನ್ಮೂಲ ಕೇಂದ್ರದಲ್ಲಿ ನಡೆದ 'ಸ್ಕೌಟರ್ಸ್/ಗೈಡರ್ಸ್ ಪುನಶ್ಚೇತ ಶಿಬಿರ'ದಲ್ಲಿ ಚಿಕ್ಕಬಳ್ಳಾಪುರ, ಚಿಂತಾಮಣಿ ಮತ್ತು ಶಿಡ್ಲಘಟ್ಟ ಸ್ಥಳೀಯ ಸಂಸ್ಥೆಗಳ 60 ಮಂದಿ ಶಿಕ್ಷಕ/ಶಿಕ್ಷಕಿಯರು ಪಾಲ್ಗೊಂಡಿದ್ದರು. ಸದರಿ ಶಿಬಿರದಲ್ಲಿ ಮುಂದುವರೆದ ತರಬೇತಿ, ಗಂಟುಗಳು, ಪ್ರಥಮ ಚಿಕಿತ್ಸೆ, ಲಾಗ್ ಪುಸ್ತಕ ನಿರ್ವಹಣೆ, ವಾರ್ಷಿಕ ಚಟುವಟಿಕೆಗಳ ಕುರಿತು ಹಾಗೂ ಸ್ಕೌಟಿಂಗ್ ಚಟುವಟಿಕೆಗಳ ಪರಿಣಾಮಕಾರಿಗೊಳಿಸುವ ಕುರಿತು ಚರ್ಚಿಸಲಾಯಿತು.



* ಫೆಬ್ರವರಿ 2 ರಿಂದ 4 ರ ವರೆಗೆ ನಡೆದ ಚಿಕ್ಕಬಳ್ಳಾಪುರ ಜಿಲ್ಲಾ ದಶಮಾನೋತ್ಸವ ಕಾರ್ಯಕ್ರಮದಲ್ಲಿ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು, ಚಿಕ್ಕಬಳ್ಳಾಪುರ ಪ್ರಥಮ ದರ್ಜೆ ಕಾಲೇಜಿನ ರೇಂಜರ್ಸ್, ಚಿಂತಾಮಣಿಯ ಸರ್ಕಾರಿ ಮಹಿಳಾ ಕಾಲೇಜಿನ ರೇಂಜರ್ಸ್, ಗೌರಿಬಿದನೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ ಹಾಗೂ ರೇಂಜರ್ಸ್ ದಶಮಾನೋತ್ಸವದ ಅಂಗವಾಗಿ ಹಮ್ಮಿಕೊಂಡಿದ್ದ ಪಥಸಂಚಲನದಲ್ಲಿ ಪಾಲ್ಗೊಂಡರು ಹಾಗೂ ವಸ್ತು ಪ್ರದರ್ಶನದಲ್ಲಿನ ಮಳಿಗೆಯಲ್ಲಿ ಜಿಲ್ಲಾ ಸಂಸ್ಥೆಯನ್ನು ಪ್ರತಿನಿಧಿಸುವ ಸಂಸ್ಥೆಯ ಮಾದರಿಗಳೊಂದಿಗೆ ವೀಕ್ಷಕರ ಗಮನ ಸೆಳೆದರು.

# ದಕ್ಷಿಣ ಕನ್ನಡ

ಜನವರಿ 1 ರಂದು ಶಾರದಾ ವಿದ್ಯಾಲಯ, ಕೊಡಿಯಾಲ್ ಬೈಲ್, ಮಂಗಳೂರು ಇಲ್ಲಿ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆಯನ್ನು ಆಚರಿಸಲಾಯಿತು. ಉತ್ತರ ಕಾಶೀ ಮಠದ ಶ್ರೀ ರಾಮಚಂದ್ರ ಗುರೂಜಿಯವರು ವಿವೇಕಾನಂದರ ಆದರ್ಶ ಮತ್ತು ದೇಶಪ್ರೇಮದ ಪ್ರಸ್ತುತೆಯ ಕುರಿತು ವಿಚಾರಪೂರಿತ ಉಪನ್ಯಾಸವಿತ್ತರು. ವೇದಿಕೆಯಲ್ಲಿ ಶಾರದಾ ಸಮೂಹ ಶಿಕ್ಷಣ ಸಂಸ್ಥೆಗಳ ಅಧ್ಯಕ್ಷರಾದ ಪ್ರೊ.ಎಂ.ಬಿ. ಪುರಾಣಿಕ್, ವಿಶ್ವಸ್ಥರಾದ ಶ್ರೀ ಪ್ರದೀಪ ಕುಮಾರ್ ಕಲ್ಕೂರ, ಜಿಲ್ಲಾ ಸ್ಕೌಟ್ಸ್ ಕಮಿಷನರ್ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಗೋಪಾಲಕೃಷ್ಣಭಟ್, ಖಜಾಂಚಿ ಶ್ರೀ ವಾಸುದೇವ ಬೋಳೂರು, ಜಿಲ್ಲಾ ಸಂಘಟಕ ಶ್ರೀ ಭರತ್ ರಾಜ್ ಕೆ. ಜಿಲ್ಲಾ ಗೈಡ್ಸ್ ತರಬೇತುದಾರರಾದ ಶ್ರೀಮತಿ ಜಯಶ್ರೀ, ವಿದ್ಯಾಲಯದ ಪ್ರಾಂಶುಪಾಲೆ ಶ್ರೀಮತಿ ಸುನೀತಾ ವಿ. ಮಡಿ, ಹೊಸದಿಗಂತ ಪತ್ರಿಕೆಯ ಸಂಪಾದಕ ಶ್ರೀ ಪ್ರಕಾಶ್ ಇಳಂತಿಲ, ಜಾಹೀರಾತು ವಿಭಾಗ ಮುಖ್ಯಸ್ಥರಾದ ಶ್ರೀ ದೇವರಾಸ್ ರೈ ಮುಂತಾದವರು ಉಪಸ್ಥಿತರಿದ್ದರು.

* ಬೆಳ್ತಂಗಡಿ ಸ್ಥಳೀಯ ಸಂಸ್ಥೆಯ ವತಿಯಿಂದ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆಯನ್ನು 12ನೇ ಜನವರಿಯಂದು ಆಚರಿಸಲಾಯಿತು. ಕಾರ್ಯಕ್ರಮದಲ್ಲಿ ಸ್ಕೌಟ್-ಗೈಡ್ಸ್ ಸ್ಥಳೀಯ ಸಂಸ್ಥೆ ಬೆಳ್ತಂಗಡಿಯ ಉಪಾಧ್ಯಕ್ಷರಾದ ಶ್ರೀ ಸುನಿಲ್ ಶೆಣೈ, ಜಿಲ್ಲಾ ಯೂತ್ ಅಧ್ಯಕ್ಷ ಶ್ರೀ ಪ್ರೀತೀಶ್, ಎ.ಡಿ.ಸಿ. ಶ್ರೀಮತಿ ವಿನಯ ಚಂದ್ರ, ಲೋಕೇಶ್ವರಿ, ಕಾರ್ಯದರ್ಶಿ ಶ್ರೀಮತಿ ಪ್ರಮೀಳಾ ಎ.ಎಲ್.ಟಿ., ಶ್ರೀ ರಮೇಶ್ ಆಚಾರ್ಯ ಎ.ಎಲ್.ಟಿ. ಶ್ರೀ ವಾಲ್ಟರ್ ಜೆ. ಪಿಂಟೋ, ಕು. ವಾಸಂತಿ, ರೇಂಜರ್ ಲೀಡರ್ ಹಾಗೆಯೇ ರೋವರ್ಸ್ ರೇಂಜರ್ಸ್ ಎಸ್.ಡಿ.ಎಂ. ಪದವಿ ಉಜಿರೆ ವಿದ್ಯಾರ್ಥಿಗಳು ಭಾಗವಹಿಸಿದ್ದರು.

* ಬೆಳ್ತಂಗಡಿ ಸ್ಥಳೀಯ ಸಂಸ್ಥೆಯಲ್ಲಿ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ ಅಂಗವಾಗಿ ರೋವರ್ಸ್-ರೇಂಜರ್ಸ್ ಯುವ ಸಮಿತಿಯ ಉದ್ಘಾಟನೆಯನ್ನು ಮಾಡಲಾಯಿತು. ಅಧ್ಯಕ್ಷರಾಗಿ ಶ್ರೀ ಅಮರ್‌ನಾಥ್, ರೋವರ್, ಉಪಾಧ್ಯಕ್ಷರಾಗಿ

ಕು. ಶ್ರೀದೇವಿ, ರೇಂಜರ್ ಆಯ್ಕೆ ಆದರು. ಉದ್ಘಾಟಕರಾಗಿ ಆಗಮಿಸಿದ ಶ್ರೀ ಸುನೀಲ್ ಶೆಣೈಯವರು ಸಮಾಜದ ಉತ್ತಮ ನಾಗರಿಕರಾಗಲು ಸ್ಕೌಟ್ಸ್-ಗೈಡ್ಸ್ ಒಂದು ಉತ್ತಮವಾದ ಚಳವಳಿ ಎಂದು ತಿಳಿಸಿದರು. ಹಾಗೆಯೇ ಜಿಲ್ಲಾ ಸಂಸ್ಥೆಯ ಜಿಲ್ಲಾ ಯುವ ಅಧ್ಯಕ್ಷ ಶ್ರೀ ಪ್ರೀತೇಶ್ ರವರು ಯುವ ಸಮಿತಿಯ ಕಾರ್ಯ ಹಾಗೂ ಅದರ ಉದ್ದೇಶದ ಬಗ್ಗೆ ತಿಳಿಸಿದರು. ಎ.ಡಿ.ಸಿ. ಶ್ರೀ ವಿನಯಚಂದ್ರ ಲೋಕೇಶ್ವರಿಯವರು ಸ್ವಾಮಿ ವಿವೇಕಾನಂದರ ಬಗ್ಗೆ ತಿಳಿಯಪಡಿಸಿದರು.

ಮೊದಲ ಚಟುವಟಿಕೆಯಾಗಿ ಹೆಲ್ಮೆಟ್ ಕಡ್ಡಾಯವೆನ್ನುವ ವಿಷಯದಂತೆ ಹೆಲ್ಮೆಟ್ ರಹಿತ ದ್ವಿಚಕ್ರ ವಾಹನ ಸವಾರರನ್ನು ತಡೆದು ಗುಲಾಬಿ ಹೂ ಕೊಟ್ಟು ಹೆಲ್ಮೆಟ್ ಧರಿಸದಿದ್ದರೆ ಆಗುವ ಅನಾಹುತಗಳ ಬಗ್ಗೆ, ಸ್ಥಳೀಯ ಸಂಸ್ಥೆ ಪದಾಧಿಕಾರಿಗಳ ಸಹಿತ ರೋವರ್ಸ್-ರೇಂಜರ್ಸ್ ದ್ವಿಚಕ್ರ ಸವಾರರ ಮನ ಒಲಿಸಿದರು. ಪೋಲಿಸ್ ಇಲಾಖಾ ಸಿಬ್ಬಂದಿ ವರ್ಗ ಸ್ಕೌಟ್ಸ್-ಗೈಡ್ಸ್ ನೊಂದಿಗೆ ಸಹಕಾರ ನೀಡಿತು.

ಕಾರ್ಯಕ್ರಮದ ನಿರೂಪಣೆ, ಸ್ವಾಗತ ಕು. ರಶ್ಮಿ ನೆರವೇರಿಸಿದರು. ಕಾರ್ಯದರ್ಶಿ ಶ್ರೀಮತಿ ಪ್ರಮೀಳಾ ಧನ್ಯವಾದ ನೆರವೇರಿಸಿದರು.

* ಜನವರಿ 27ರಂದು ಭಾರತ್ ಸ್ಕೌಟ್ಸ್-ಗೈಡ್ಸ್, ದಕ್ಷಿಣ ಕನ್ನಡ, ಮಂಗಳೂರು ನಗರ ಸ್ಥಳೀಯ ಸಂಸ್ಥೆ ವತಿಯಿಂದ 2017ನೇ ಸಾಲಿನ ಪ್ರಥಮ ಹಾಗೂ ದ್ವಿತೀಯ ಸೋಪಾನ, ದ್ವಿತೀಯ ಚರಣ್, ರಜತ್ ಗರಿ ಪ್ರಶಸ್ತಿ ಪತ್ರ ಪ್ರಧಾನ ಸಮಾರಂಭ ವನ್ನು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನ, ನೆಹರೂ ಅವೆನ್ಯೂ ರಸ್ತೆ, ಲಾಲ್‌ಭಾಗ್, ಮಂಗಳೂರು ಇಲ್ಲಿ ನಡೆಯಿತು.

ಶ್ರೀಮತಿ ಜೋಸ್ಪಿನ್ ಅಲ್ಬುಕರ್ಕ್, ಸಹಾಯಕ ಜಿಲ್ಲಾ ಆಯುಕ್ತರು ಮಂಗಳೂರು. ಶ್ರೀ ಸಂತೋಷ್ ಆಳ್ವ ಉದ್ಯಮಿ ಮಂಗಳೂರು, ಶ್ರೀ ವಿ.ಜೆ. ಸುಹಾನ್ ಆಳ್ವ ನಿರೂಪಕ, ಕಾರ್ಯಕ್ರಮ ನಿರ್ವಾಹಕರು ಪ್ರಶಸ್ತಿ ಪತ್ರವನ್ನು ನೀಡಿದರು. ಶ್ರೀ ವಸಂತ್ ರಾವ್ ಉಪಸ್ಥಿತರಿದ್ದರು. ಕಾರ್ಯದರ್ಶಿ ಲತಿಕಾ ಸ್ವಾಗತಿಸಿದರು. ಜೊತೆ ಕಾರ್ಯದರ್ಶಿ ಶ್ರೀ ನಾರಾಯಣ್ ಸಾಂದರ್ಭಿಕ ಭಾಷಣ ಮಾಡಿದರು. ಶ್ರೀ ಸಂತೋ ಮಿಸ್ಕಿತ್ ನಿರೂಪಣೆ ಮಾಡಿದರು. ಶ್ರೀಮತಿ ಸುಫಲಾ ವಂದಿಸಿದರು. ಸಹಕಾರ್ಯದರ್ಶಿ ದಿನೇಶ್, ಮೋಹಿನಿ, ಹರ್ಷಿತ, ಯಶೋಧ ಸಹಕರಿಸಿದರು.



* ಜನವರಿ 5 – 6 ರಂದು ಉಳ್ಳಾಲ ಸ್ಥಳೀಯ ಸಂಸ್ಥೆಯ ಸ್ಕೌಟ್-ಗೈಡ್ ಮೇಳ ಹಾಗೂ ಕಬ್-ಬುಲ್‌ಬುಲ್ ಉತ್ಸವವು ಆಸಿಸಿ ಸೆಂಟ್ರಲ್ ಶಾಲೆ ಬಗಂಬಿಲ್ ದೇರಳಕಟ್ಟೆಯಲ್ಲಿ ನಡೆಯಿತು. ಮೇಳದ ಉದ್ಘಾಟನೆಯನ್ನು ಶ್ರೀ ಎನ್.ಜಿ. ಮೋಹನ್ ಇವರು ನೆರವೇರಿಸಿದರು. ವೇದಿಕೆಯಲ್ಲಿ ಶ್ರೀ ಎಮ್.ಜಿ. ಕಜೆ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು, ಶಾಲಾ ಪ್ರಾಂಶುಪಾಲರಾದ ಶ್ರೀಮತಿ ಜೂಲಿಯಾನ ಪಾಯಸ, ಉಪಕಾರ್ಯದರ್ಶಿ ಶ್ರೀಮತಿ ರೀನಾ ರೋಡ್ರಿಗಸ್, ಸ್ಕೌಟ್ ಪದಾಧಿಕಾರಿಗಳು, ಶಿಬಿರ ನಾಯಕರುಗಳಾದ ಶ್ರೀ ಪ್ರತೀಪ್ ಮಂಜನಾಡಿ, ಶ್ರೀಮತಿ ಭಾರತಿ ಎಂ.ಕೆ. ವೇದಿಕೆಯಲ್ಲಿ ಉಪಸ್ಥಿತರಿದ್ದರು. ಕಾರ್ಯದರ್ಶಿಯವರು ಸ್ವಾಗತಿಸಿದರು. ಶ್ರೀಮತಿ ಜಯವಂತಿ ಸೋನ್ಸ್ ವಂದನಾರ್ಪಣೆ ಗೈದರು. ಸ್ಥಳೀಯ ಶಾಲೆಯ ಸ್ಕೌಟರ್ ಪ್ರಭಾತರವರು ಕಾರ್ಯಕ್ರಮ ನಿರೂಪಿಸಿದರು. ಈ ಮೇಳಕ್ಕೆ ವಿವಿಧ ಶಾಲೆಗಳಿಂದ 312 ಸ್ಕೌಟ್ಸ್-ಗೈಡ್ಸ್ ಹಾಗೂ 23 ಶಿಕ್ಷಕರು ಭಾಗವಹಿಸಿದ್ದರು. ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಉಪ್ಪಿನಂಗಡಿ ವತಿಯಿಂದ ಸ್ಕೌಟ್ಸ್-ಗೈಡ್ಸ್ ಮೇಳ ಹಾಗೂ ಕಬ್ಸ್-ಬುಲ್‌ಬುಲ್ಸ್ ಉತ್ಸವ ನೆಲ್ಯಾಡಿ ಸಂತ ಜಾರ್ಜ್ ವಿದ್ಯಾ ಸಂಸ್ಥೆಯಲ್ಲಿ ಜನವರಿ 5 – 6 ರಂದು ನೆರವೇರಿತು.

ಶಿಬಿರವನ್ನು ನೆಲ್ಯಾಡಿ ಪಂಚಾಯತ್ ಅಧ್ಯಕ್ಷರಾದ ಶ್ರೀ ಜಯಾನಂದ ಬಂಟ್ರಿಯಾಲ್ ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಅಬ್ರಹಾಂ ವರ್ಗೀಸ್ ಜಿಲ್ಲಾ ಪದಾಧಿಕಾರಿಗಳು ಜಿಲ್ಲಾ ಯುವ ಕಮಿಟಿ ಅಧ್ಯಕ್ಷ ಶ್ರೀ ಪ್ರೀತೇಶ್ ಶುಭ ಹಾರೈಸಿದರು. ಮೇಳದ ನಾಯಕಿ ಸರೋಜ ಕುಮಾರಿ ಸ್ವಾಗತಿಸಿ ಶ್ರೀ ಎಂ.ಐ. ತೋಮಸ್ ವಂದಿಸಿದರು. ಬೆಂಕಿ ರಹಿತ ಅಡುಗೆ, ಗ್ರೀಟಿಂಗ್ಸ್ ಕಾರ್ಡ್ ರಚನೆ ಮುಂತಾದ ಚಟುವಟಿಕೆಗಳನ್ನು ನಡೆಸಲಾಯಿತು. ರಾತ್ರಿ ನಡೆದ ಶಿಬಿರಾಗ್ನಿಯನ್ನು ಸಂತ ಜಾರ್ಜ್ ವಿದ್ಯಾಸಂಸ್ಥೆಯ ಸಂಚಾಲಕರೂ ಸ್ಥಳೀಯ ಸಂಸ್ಥೆಯ ಅಧ್ಯಕ್ಷರೂ ಆದ ಶ್ರೀ ಅಬ್ರಹಾಂ

ವರ್ಗೀಸ್ ರವರು ಉದ್ಘಾಟಿಸಿ ಅದರ ಮಹತ್ವ ತಿಳಿಸಿದರು. 2ನೇ ದಿನ ಸರ್ವಧರ್ಮ ಪ್ರಾರ್ಥನೆ ನೆರವೇರಿತು. ಆ ಬಳಿಕ ಸ್ಕೌಟ್ಸ್-ಗೈಡ್ಸ್ ಗಳಿಂದ ಧ್ವಜಸ್ತಂಭ ನಿರ್ಮಾಣ. ಗ್ರೀಟಿಂಗ್ಸ್, ಟ್ರೀ ರಚನೆ ಮುಂತಾದ ಚಟುವಟಿಕೆಗಳು ನಡೆದವು.

ಸಂಜೆ ನಡೆದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಅಬ್ರಹಾಂ ವರ್ಗೀಸ್ ವಹಿಸಿ ಸಹಕರಿಸಿದ ಶಿಕ್ಷಕರನ್ನು, ಉತ್ಸವದಲ್ಲಿ ಪಾಲ್ಗೊಂಡ ವಿಶೇಷ ಆಸಕ್ತಿ ಹೊಂದಿದ ಮಕ್ಕಳನ್ನು ಅಭಿನಂದಿಸಿದರು. ಶ್ರೀ ಜನಾರ್ಧನ ಟಿ. ಸ್ವಾಗತಿಸಿ, ಶ್ರೀಮತಿ ಸರೋಜಕುಮಾರಿ ವರದಿ ವಾಚಿಸಿದರು. ಕಾರ್ಯಧ್ಯಕ್ಷೆ ದೇವಕಿ ಎಂ. ಶುಭ ಹಾರೈಸಿದರು. ಶ್ರೀಮತಿ ಜಯಂತಿ ಬಿ.ಎಂ. ಕಾರ್ಯಕ್ರಮ ನಿರ್ವಹಿಸಿದರು. ಶ್ರೀ ಆರ್. ವೆಂಕಟ್ರಮಣ. ಶ್ರೀ ಎಂ.ಕೆ. ಎಲಿಯಾಸ್, ಶ್ರೀ ಹರಿಪ್ರಸಾದ್ ಉಪಸ್ಥಿತರಿದ್ದರು. ಕಾರ್ಯದರ್ಶಿ ಶ್ರೀ ರವೀಂದ್ರ ವಂದಿಸಿದರು. ಒಟ್ಟು 18 ಶಾಲೆಗಳಿಂದ 267 ಮಕ್ಕಳು ಮತ್ತು 28 ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ಸ್, ಫ್ಲಾಕ್ ಲೀಡರ್ಸ್ ಭಾಗವಹಿಸಿದ್ದರು.

* ಜನವರಿ 30 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಸುಳ್ಯ ಇದರ ವಾರ್ಷಿಕ ರ್‍ಯಾಲಿ ಕೆ.ವಿ.ಜಿ. ಪುರಭವನದಲ್ಲಿ ನಡೆಯಿತು. ಸುಮಾರು 800 ಸ್ಕೌಟ್ಸ್-ಗೈಡ್ಸ್ ಹಾಜರಿದ್ದರು. ಮೇಳ ನಿರ್ದೇಶಕಿ ಶ್ರೀಮತಿ ಪ್ರೇಮಲತಾ ಎ.ಎಚ್.ಎ.ಎಲ್.ಟಿ. (ಗೈ), ಮತ್ತು ಜಂಟಿ ಕಾರ್ಯದರ್ಶಿ ಶ್ರೀಮತಿ ರಾಜೀವಿ ವ.ವಿ. ಇವರ ನೇತೃತ್ವದಲ್ಲಿ ಧ್ವಜವಂದನೆ ನಡೆಯಿತು. ಕ್ಷೇತ್ರ ಶಿಕ್ಷಣಾಧಿಕಾರಿಯಾದ ಶ್ರೀ ಕೆಂಪಲಿಂಗಪ್ಪ ಬಿ.ಎಸ್. ಉಪಸ್ಥಿತರಿದ್ದರು. ನಗರ ಮೆರವಣಿಗೆಯನ್ನು ಶ್ರೀಮತಿ ಕಮಲಾಕ್ಷಿ ರೈ (ಉಪಾಧ್ಯಕ್ಷರು)ಉದ್ಘಾಟಿಸಿ ಶುಭ ಕೋರಿದರು. ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಸಕ ಶ್ರೀ ಎಸ್. ಅಂಗಾರರು ವಹಿಸಿಕೊಂಡು ರಾಷ್ಟ್ರಪ್ರೇಮವನ್ನು ಬೆಳೆಸಿಕೊಳ್ಳಬೇಕೆಂದು ಹಿತನುಡಿ ನುಡಿದರು. ಅಕಾಡೆಮಿ ಆಫ್ ಲಿಬರಲ್ ಎಜುಕೇಶನ್ ಸುಳ್ಯ ಇದರ ಅಧ್ಯಕ್ಷರಾದ ಡಾ. ಕೆ.ವಿ. ಚಿದಾನಂದರು ಕಾರ್ಯಕ್ರಮವನ್ನು ದೀಪ ಬೆಳಗಿಸುವ ಮೂಲಕ ಉದ್ಘಾಟಿಸಿ "ಶಿಸ್ತು ಬದ್ಧ ಜೀವನಕ್ಕೆ ಸ್ಕೌಟ್ಸ್-ಗೈಡ್ಸ್ ಚಳವಳಿ ಅಗತ್ಯವಾದದ್ದು" ಎಂದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ರವರು ಸ್ಕೌಟ್ ಚಳುವಳಿ ಬಗ್ಗೆ ಸ್ಕೌಟ್ಸ್-ಗೈಡ್ ಪರೀಕ್ಷೆಗಳನ್ನು ಬರೆಯುವುದರ ಬಗ್ಗೆ ಅದರಿಂದಾಗುವ ಪ್ರಯೋಜನಗಳ ಬಗ್ಗೆ ತಿಳಿಸಿದರು. ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಅರೆಭಾಷೆ ಅಕಾಡೆಮಿ ಅಧ್ಯಕ್ಷರಾದ ಶ್ರೀ ಪಿ.ಸಿ. ಜಯರಾಮ್ ಮತ್ತು ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದ ವ್ಯವಸ್ಥಾಪನಾ ಸಮಿತಿಯ ಅಧ್ಯಕ್ಷರಾದ ಶ್ರೀ ನಿತ್ಯಾನಂದ ಮುಂಡೋಡಿಯವರು ಶುಭ ಹಾರೈಸಿದರು. ಜಿಲ್ಲಾ ಪದಾಧಿಕಾರಿಗಳು, ಸ್ಥಳೀಯ ಸಂಸ್ಥೆ ಖಜಾಂಚಿಯಾದ ರೊ. ಮಹಾಲಕ್ಷ್ಮೀ ಕೊರಂಬಡ್ಕ, ಶ್ರೀ ಲಕ್ಷ್ಮೀಶ ರೈ ದೈಹಿಕ ಶಿಕ್ಷಣ ಪರಿವೀಕ್ಷಕರು. ವೇದಿಕೆಯಲ್ಲಿದ್ದರು.



* ಫೆಬ್ರವರಿ 3 ರಂದು ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟರ್ಸ್-ಗೈಡ್ಸ್ ಸಮಾವೇಶವನ್ನು ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಜರುಗಿಸಲಾಯಿತು. ಜಿಲ್ಲಾ ಕಾರ್ಯದರ್ಶಿ ಯು.ಕೆ. ಶ್ರೀ ಗೋಪಾಲಕೃಷ್ಣ ಭಟ್ ರವರು ಪ್ರಾಸ್ತಾವಿಕ ನುಡಿಗಳಲ್ಲಿ ಸಮಾವೇಶದ ಅಗತ್ಯತೆ ಮತ್ತು ಉದ್ದೇಶವನ್ನು ತಿಳಿಸಿದರು. ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಡಾ. ಎನ್.ಜಿ. ಮೋಹನ್ ರವರು ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಯಾವುದೇ ಸಂಸ್ಥೆಯು "ನಿಂತ ನೀರಿನಂತಿರದೆ ಹರಿಯುವ ನೀರಿನಂತಿರಬೇಕು" ಈ ನಿಟ್ಟಿನಲ್ಲಿ ನಮ್ಮ ಸಂಸ್ಥೆಯಲ್ಲಿ ಅನೇಕ ಕೆಲಸಕಾರ್ಯಗಳನ್ನು ನಾವು ನಡೆಸಬೇಕಾಗಿದೆ ಎಂದರು. ಡಾ. ಶ್ರೀನಿವಾಸ ಕಕ್ಕಿಲ್ಲಾಯರವರು ತಮ್ಮ ದಿಕ್ಸೂಚಿ ಭಾಷಣದಲ್ಲಿ ಸ್ಕೌಟ್ಸ್-ಗೈಡ್ಸ್ ತತ್ವ ಸಿದ್ಧಾಂತಗಳನ್ನು ಮಕ್ಕಳು ಜೀವನದಲ್ಲಿ ಅನುಷ್ಠಾನಗೊಳಿಸುವಂತೆ ಶಿಕ್ಷಕರು ನೋಡಿಕೊಳ್ಳಬೇಕು ಎಂದರು. ಶ್ರೀಲಂಕೆಯಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ಫ್ರೆಂಡ್‌ಶಿಪ್ ಜಾಂಬೂರಿಯಲ್ಲಿ ಭಾಗವಹಿಸಿದ ಶಾರದಾ ಪ್ರೌಢಶಾಲೆ ಮಂಗಳೂರಿನ ನಾಲ್ಕು ಸ್ಕೌಟ್ಸ್ ಮತ್ತು ಗೈಡ್ ಗೈಡ್ಸ್, ಮಲೇಶಿಯಾದಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ಜಾಂಬೂರಿಯಲ್ಲಿ ಭಾಗವಹಿಸಿದ ಸೈಂಟ್ ಆಗ್ನೇಸ್ ಶಾಲೆ ಮಂಗಳೂರಿನ ಇಬ್ಬರು ಗೈಡ್ಸ್ ಮತ್ತು ಅಮೇರಿಕಾದಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ವಿಜ್ಞಾನ ಸ್ಪರ್ಧೆಯಲ್ಲಿ ಭಾಗವಹಿಸಿದ ಇಂದ್ರಪ್ರಸ್ಥ ವಿದ್ಯಾಲಯ ಉಪ್ಪಿನಂಗಡಿ ಸ್ಕೌಟ್ ನಚಿಕೇತ್ ಈ ಮಕ್ಕಳನ್ನು ಗುರುತಿಸಿ ಪ್ರೋತ್ಸಾಯಿಸಲಾಯಿತು. ಶಾರದಾ ಪ್ರೌಡಶಾಲೆಯ ಗೋಕುಲ್, ಸೈಂಟ್ ಆಗ್ನೇಸ್ ಶಾಲೆಯ ಶಾಲೋನ್ ಪಿಂಟೋ ಮತ್ತು



ಇಂದ್ರಪ್ರಸ್ಥ ವಿದ್ಯಾಲಯದ ನಚೀಕೇತ್ ರವರು ತಮ್ಮ ಅನುಭವಗಳನ್ನು ತಿಳಿಸಿದರು. ಬಳಿಕ 2017-18 ರಲ್ಲಿ ನಿವೃತ್ತರಾದ ಸೈಂಟ್ ತೆರೆಸಾ ಶಾಲೆ ಬೆಳ್ತಂಗಡಿಯ ದೈಹಿಕ ಶಿಕ್ಷಕಿ ಶ್ರೀಮತಿ ಫಿಲೋಮಿನಾ ಮತ್ತು ಸೆಂಟ್ರಲ್ ಮುಸ್ಲಿಂ ಅನುದಾನಿದ ಹಿ.ಪ್ರಾ. ಶಾಲೆ. ಮಲಾರ್ ಪದವ್‌ನ ಎಂ.ಎಚ್. ಮಹಮ್ಮದ್ ರವರನ್ನು ಸನ್ಮಾನಿಸಲಾಯಿತು. ರಾಮಕುಂಜೇಶ್ವರ ಆಂಗ್ಲ ಮಾಧ್ಯಮ ಶಾಲೆ ಉಪ್ಪಿನಂಗಡಿಯ ಶ್ರೀಮತಿ ಪ್ರೇಮ ಬಿ. ಮತ್ತು ವಿವೇಕಾನದಂದ ಶಾಲೆ ಪುತ್ತೂರಿನ ಶ್ರೀ ಮಂಜುನಾಥ್ ಇವರಿಗೆ ವೃಕ್ಷಮಣಿ ಪ್ರದಾನ ಮಾಡಲಾಯಿತು. ವೇದಿಕೆಯಲ್ಲಿ ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು ಜೊತೆ ಕಾರ್ಯದರ್ಶಿ ಶ್ರೀಮತಿ ಜಯವಂತಿ ಸೋನ್ಸ್, ಸಹಕಾರ್ಯದರ್ಶಿ ಶ್ರೀ ಎಂ.ಜಿ. ಕಜೆ ಮೊದಲಾದವರು ಉಪಸ್ಥಿತರಿದ್ದರು. ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿಯವರು ಸ್ವಾಗತಿಸಿದರು. ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ಹರವರು ಧನ್ಯವಾದ ಸಮರ್ಪಣೆಗೈದರು. ಜಿಲ್ಲಾ ಗೈಡ್ ತರಬೇತು ಆಯುಕ್ತೆ ಶ್ರೀಮತಿ ಜಯಶ್ರೀ, ಜಿಲ್ಲಾ ಸ್ಕೌಟ್ ತರಬೇತು ಆಯುಕ್ತರಾದ ಶ್ರೀ ಪ್ರೀತಮ್ ಕುಮಾರ್, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಭರತ್ ರಾಜ್ ಮೊದಲಾದವರು ಸಹಕರಿಸಿದರು. ಶ್ರೀ ಎಂ. ಶಾಂತಾರಾಮ್ ಪ್ರಭುರವರು ಕಾರ್ಯಕ್ರಮ ನಿರ್ವಹಿಸಿದರು.

* ಫೆಬ್ರವರಿ 4 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಜಿಲ್ಲಾಧಿಕಾರಿಗಳ ನಿವಾಸದಲ್ಲಿ ತೃತೀಯ ಚರಣ್ (ಕಬ್ಸ್), ಸುವರ್ಣಗರಿ (ಬುಲ್‌ಬುಲ್ಸ್) ತೃತೀಯ ಸೋಪಾನ್ (ಸ್ಕೌಟ್ಸ್-ಗೈಡ್ಸ್) ನಿಪುಣ್ (ರೋವರ್ಸ್-ರೇಂಜರ್ಸ್) ಪ್ರಶಸ್ತಿ ಸಮಾರಂಭವನ್ನು ಸಂಘಟಿಸಲಾಗಿತ್ತು. ಅಧ್ಯಕ್ಷತೆ ವಹಿಸಿದ್ದ ಜಿಲ್ಲಾಧಿಕಾರಿ ಶ್ರೀ ಸಸಿಕಾಂತ್ ಸೆಂಥಿಲ್ ಮಾತನಾಡಿ, ಸ್ಕೌಟ್ಸ್-ಗೈಡ್ಸ್ ನಮ್ಮ ಜೀವನದ ಶಿಕ್ಷಣವಾಗಿದೆ. ಇಲ್ಲಿ ಕಲಿತ ಜ್ಞಾನವನ್ನುಗೌರವಿಸಬೇಕು ಎಂದರು.

ಸಂಸ್ಥೆಯು ಬಹುಮುಖ ಕಾರ್ಯಕ್ರಮಗಳ ಮೂಲಕ ರಾಜ್ಯದಲ್ಲಿಯೇ ಮುಂಚೂಣಿಯಲ್ಲಿದೆ. 18 ವರ್ಷಗಳಿಂದ ಈ ಸಂಸ್ಥೆ ನಿರಂತರ ಪ್ರಶಂಸೆ ಗಳಿಸಿದೆ. ಈ ಚಳವಳಿಯಲ್ಲಿ ವಯೋಮಾನಕ್ಕನುಗುಣವಾದ ಕಾರ್ಯಕ್ರಮಗಳಿವೆ. ಎಂದು ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಎನ್.ಜಿ. ಮೋಹನ್ ತಿಳಿಸಿದರು.

ಭಾರತ್ ಸ್ಕೌಟ್ಸ್-ಗೈಡ್ಸ್ ವತಿಯಿಂದ ಜಿಲ್ಲಾ ಮಟ್ಟದಲ್ಲಿ ವಿವಿಧ ಯೋಜನೆ ಸಿದ್ದಪಡಿಸಿದ್ದು, ಈ ಕುರಿತು ವಿವಿಧ ಬೇಡಿಕೆಗಳ ಪತ್ರವನ್ನು ಜಿಲ್ಲಾಧಿಕಾರಿಗೆ ಶ್ರೀ ಎನ್.ಜಿ. ಮೋಹನ್ ಸಲ್ಲಿಸಿದರು. ಎಸ್.ಎಸ್.ಎಲ್.ಸಿ.ಯಲ್ಲಿ 622 ಅಂಕ ಗಳಿಸಿದ ಕು. ಸ್ವಾತಿ ಭಟ್ ಅವರನ್ನು ಈ ಸಂದರ್ಭದಲ್ಲಿ ಅಭಿನಂದಿಸಲಾಯಿತು. 278 ಕಬ್ಸ್, 302 ಬುಲ್ ಬುಲ್ಸ್ 290 ಗೈಡ್ಸ್, 33 (ನಿಪುಣ್ ರೋವರ್ಸ್) ಹಾಗೂ 53 (ನಿಪುಣ್ ರೇಂಜರ್ಸ್) ಗಳಿಗೆ ಪ್ರಶಸ್ತಿ ಪತ್ರವನ್ನು ನೀಡಲಾಯಿತು. ಗೈಡ್ಸ್ ಜಿಲ್ಲಾ ಆಯುಕ್ತೆ ಶ್ರೀಮತಿ ಐರಿನ್ ಡಿ'ಕುನ್ಹ, ಜಿಲ್ಲಾಧಿಕಾರಿಯವರ ಕುಟುಂಬವರ್ಗ ಉಪಸ್ಥಿತರಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಯು. ಗೋಪಾಲಕೃಷ್ಣ ಭಟ್ ವಂದಿಸಿದರು. ಶ್ರೀ ಎಂ.ಜಿ. ಕಜೆ ನಿರೂಪಿಸಿದರು.

*The Most Worth -*
*while thing is to try*
*to put happiness into*
*the lives of others*

**- LORD BADEN POWELL**





## ದಾವಣಗೆರೆ

ಗಣರಾಜ್ಯೋತ್ಸವದ ಶುಭಾಷಯವನ್ನು ಅಂಚೆ ಕಛೇರಿಯ ಹೊಸ ತಂತ್ರಜ್ಞಾನ ಇ-ಪೋಸ್ಟ್ ಮೂಲಕ ಪ್ರಥಮ ಬಾರಿಗೆ ರಾಷ್ಟ್ರಪತಿ, ಪ್ರಧಾನ ಮಂತ್ರಿ ಹಾಗೂ ರಾಜ್ಯದ ಮುಖ್ಯಮಂತ್ರಿಗೆ ರವಾನಿಸಿದರು. ಇದರಲ್ಲಿ ಸೇಂಟ್ ಪಾಲ್ಸ್ ಗೈಡ್ಸ್‌ಗಳು. ಶ್ರೀ ತರಳಬಾಳು ಶಾಲೆಯ ಗೈಡ್ಸ್ ಹಾಗೂ ಮದರ್ ತೆರೇಸಾ ಓಪನ್ ಗೈಡ್ ಕಂಪನಿ ಮಕ್ಕಳು ಶುಭಾಷಯವನ್ನು ಕೋರಿದರು. ಇದರಲ್ಲಿ ಅಂಚೆ ಕಚೇರಿಯ ಪೋಸ್ಟ್ ಮಾಸ್ಟರ್ ಶ್ರೀ ಓಂಕಾರಪ್ಪನವರು ಮತ್ತು ಸೇಂಟ್ ಪಾಲ್ಸ್ ಶಾಲೆಯ ಮ್ಯಾನೇಜರ್, ಸಿಸ್ಟರ್ ಸಮಂತರವರು ಹಾಗೂ ಜಿಲ್ಲಾ ಸಂಘಟಕಾರದ ಕು. ಹೆಚ್.ಎಂ. ಪ್ರಿಯಾಂಕ ಮತ್ತು ಗೈಡ್ ಕ್ಯಾಪ್ಟನ್‌ರಾದ ಶ್ರೀಮತಿ ಹೆಚ್.ಎಂ. ರಜನಿ, ನಯನ ಯೇಸುಪ್ರಿಯಾ, ರೇಖಾಬಾಯಿಯವರು, ಬಾಪೂಜಿ ಓಪನ್ ಸ್ಕೌಟ್ ಟ್ರೂಪಿನ ಲೀಡರ್ ಆದ ಶ್ರೀ ರವೀಂದ್ರಸ್ವಾಮಿ ಟಿ.ಎಂ. ಹಾಗೂ ಅಂಚೆ ಕಛೇರಿಯ ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.



* ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ವೀರಯೋಧರಾದ ಶ್ರೀ ಜಾವೀದ್ ಕೆ. ವೀರಮರಣವನ್ನು ಹೊಂದಿರುವ ವೀರನಿಗೆ ಶ್ರದ್ಧಾಂಜಲಿಯನ್ನು ಶ್ರೀ ತರಳಬಾಳು ಶಾಲೆಯ ಸ್ಕೌಟ್-ಗೈಡ್ಸ್, ಮದರ್ ತೆರೇಸಾ ಓಪನ್ ಗೈಡ್ ಕಂಪನಿ, ಬಾಪೂಜಿ ಓಪನ್ ಸ್ಕೌಟ್ ಟ್ರೂಪ್‌ನ ಸ್ಕೌಟ್ಸ್ ಸೇರಿಕೊಂಡು ಭಾವಪೂರ್ಣ ಶ್ರದ್ಧಾಂಜಲಿಯನ್ನು ಅರ್ಪಿಸಲಾಯಿತು. ಶ್ರೀ ತರಳಬಾಳು ಸೆಂಟ್ರಲ್ ಶಾಲೆಯ ಪ್ರಾಂಶುಪಾಲರಾದ ಶ್ರೀ ಕೆ. ಸೋಮಶೇಖರ್, ಸ್ಕೌಟ್ ಮಾಸ್ಟರ್‌ರಾದ ಶ್ರೀ ರವೀಂದ್ರಸ್ವಾಮಿ ಶ್ರೀ ಟಿ.ಎಂ. ಸಿದ್ದೇಶ್ ಹಾಗೂ ಶ್ರೀ ಲೋಹಿತ್ ರವರು ಮದರ್ ತೆರೇಸಾ ಗೈಡ್ ಕಂಪನಿಯ ಗೈಡ್ ಕ್ಯಾಪ್ಟನ್ ರಮ್ಯ ಹೆಚ್.ಎಂ. ಕಾರ್ಯಕ್ರಮದಲ್ಲಿ ಉಪಸ್ಥಿತಿಯಲ್ಲಿದ್ದರು.

## ಗದಗ



ಫೆಬ್ರವರಿ 7 ರಂದು ಸ.ಹಿ.ಪ್ರಾ.ಡಿ.ಇ.ಪಿ.ಶಾಲೆ ಮಾರುತಿ ನಗರ ಲಕ್ಕುಂಡಿಯಲ್ಲಿ ಸ್ವಾಮಿ ವಿವೇಕಾನಂದ ಸ್ಕೌಟ್ಸ್ ದಳದಲ್ಲಿ ದೀಕ್ಷಾ ಸಮಾರಂಭ ನೆರವೇರಿತು. ಸ್ಕೌಟ್ ಮಾಸ್ಟರ್ ರಾದ ಶ್ರೀ ಎಸ್.ಎಮ್ ಪಾಟೀಲ ಹಾಗೂ ಶ್ರೀ ಕೆ.ಎಸ್. ಬಾಳಿಕಾಯಿ ನೇತೃತ್ವ ವಹಿಸಿದ್ದರು. ಗದಗ ಗ್ರಾಮೀಣ ವಲಯದ ಟ್ರೈನಿಂಗ್ ಕೌನ್ಸಿಲರಾದ ಶ್ರೀ ಸಿ.ಎಸ್. ತೋಟಪ್ಪನವರ ಕಾರ್ಯಕ್ರಮ ನಡೆಸಿಕೊಟ್ಟರು. ಇದೇ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳನ್ನು ಉದ್ದೇಶಿಸಿ ಮಾತನಾಡಿದ ಡಿ.ಡಿ.ಪಿ.ಐ. ಕಛೇರಿಯ ಜಿಲ್ಲಾ ಉಪಯೋಜನಾ ಸಮನ್ವಯಾಧಿಕಾರಿಗಳಾದ ಶ್ರೀ ವ್ಹಿ.ವ್ಹಿ. ನಡುವಿನಮನಿ, ಭಾರತ್ ಸ್ಕೌಟ್-ಗೈಡ್‌ಸಂಸ್ಥೆಯು ಶಿಸ್ತು, ಸೇವೆ, ರಾಷ್ಟ್ರೀಯ ಮನೋಭಾವ, ಕೌಶಲ್ಯಗಳನ್ನು ಬೆಳೆಸುವ ಸಂಸ್ಥೆಯಾಗಿದ್ದು ಈ ಶಾಲೆಯ ಮಕ್ಕಳು ಇದರಲ್ಲಿ ತೊಡಗಿಸಿಕೊಂಡು ಇದರ ಸಂಪೂರ್ಣ ಸದುಪಯೋಗಪಡಿಸಿಕೊಳ್ಳಬೇಕೆಂದು ತಿಳಿಹೇಳಿದರು. ತಾ.ಪಂ. ಸದಸ್ಯರಾದ ಶ್ರೀಮತಿ ಸುಜಾತ ಬ. ಖಂಡು ಸ್ಕೌಟ್-ಗೈಡ್‌ಗಳಿಗೆ ಕಂಠವಸ್ತ್ರ, ಕ್ಯಾಪ್ ತೊಡಿಸಿ ಶುಭ ಹಾರೈಸಿದರು. ಅತಿಥಿಗಳಾಗಿ ಆಗಮಿಸಿದ್ದ ಭಾರತ್ ಸ್ಕೌಟ್ಸ್-ಗೈಡ್ಸ್ ತಾಲ್ಲೂಕಾ ಸಂಸ್ಥೆ ಗದಗ ಗ್ರಾಮೀಣದ ಉಪಾಧ್ಯಕ್ಷರಾದ ಶ್ರೀ ಎನ್.ಸಿ. ಮುಕ್ಕಣ್ಣವರ ಮಾತನಾಡಿ ಇದು ನಿಮ್ಮ ಜೀವನದ ಅತ್ಯಂತ ಮಹತ್ವದ ದಿನ ನೀವು 3 ಅಂಶಗಳಂತೆ ಕಾರ್ಯ ನಿರ್ವಹಿಸಿ ಶಾಲೆಗೆ ಮತ್ತು ಲಕ್ಕುಂಡಿ ಗ್ರಾಮಕ್ಕೆ ಉತ್ತಮ ಹೆಸರು

ತರಬೇಕೆಂದು ಹೇಳಿದರು. ಇನ್ನೋರ್ವ ಅತಿಥಿಗಳಾದ ಗದಗ ಗ್ರಾಮೀಣದ ತಾಲ್ಲೂಕಾ ಶಿಕ್ಷಕರ ಸಂಘದ ಅಧ್ಯಕ್ಷರಾದ ಶ್ರೀ ಡಿ.ಎಸ್. ತಳವಾರ ಮಾತನಾಡಿ ದೀಕ್ಷೆ ಪಡೆದ ಮಕ್ಕಳು ಜಿಲ್ಲಾ ರಾಜ್ಯ ಮತ್ತು ರಾಷ್ಟ್ರಪತಿ ಪುರಸ್ಕಾರಗಳನ್ನು ಪಡೆದು ಶಾಲೆಗೆ ಕೀರ್ತಿ ತರಬೇಕೆಂದು ಹೇಳಿದರು. ಭಾರತ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ. ಜಿ.ಹೆಚ್. ಪೂಜಾರ ಮಾತನಾಡಿ ಶಾಲೆಯ ಮುಖ್ಯೋಪಾಧ್ಯಾಯರು ದಳದ 32 ಸದಸ್ಯರಿಗೆ ಉಚಿತ ಸಮವಸ್ತ್ರ ಒದಗಿಸಿ ಸ್ಕೌಟ್ಸ್-ಗೈಡ್ಸ್ ಬೆಳವಣಿಗೆಗೆ ವಿಶೇಷ ಕೊಡುಗೆ ನೀಡಿದ್ದಾರೆ ಮತ್ತು ಅವರ ಕಾರ್ಯ ಶ್ಲಾಘನೀಯ ಎಂದು ಹೇಳಿದರು. ಎನ್.ಜಿ.ಓ. ದ ರಾಜ್ಯ ಪರಿಷತ್ ಸದಸ್ಯರಾದ ಶ್ರೀ ವ್ಹಿ.ಬಿ. ಪೋಲಿಸ್ ಪಾಟೀಲ ಮಾತನಾಡಿ ಸೇವೆಯೆಂಬುದು ಕೇವಲ ಸ್ಕೌಟ್ಸ್-ಗೈಡ್ಸ್‌ಗಳಿಗೆ ಅಷ್ಟೇ ಅಲ್ಲ ಅದರಲ್ಲಿ ಕಾರ್ಯನಿರ್ವಹಿಸುವ ಸ್ಕೌಟ್ ಮಾಸ್ಟರ್-ಗೈಡ್ ಕ್ಯಾಪ್ಟನ್ನರು ತಾಲ್ಲೂಕಾ, ಜಿಲ್ಲಾ, ರಾಜ್ಯ ರಾಷ್ಟ್ರ ಹಂತದ ಪದಾಧಿಕಾರಿಗಳ ಇದರಲ್ಲಿ ಅನೇಕ ವಿಧದ ಸೇವೆಯನ್ನು ಸಲ್ಲಿಸಬೇಕಾಗುತ್ತದೆ ಎಂದು ಹೇಳಿದರು. ಕಾರ್ಯಕ್ರಮದಲ್ಲಿ ತಾಲ್ಲೂಕಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಎನ್.ವ್ಹಿ. ಕಿತ್ತೂರ ಶ್ರೀಮತಿ ಆರ್.ಕೆ. ಹಳ್ಯಾಳ, ಶ್ರೀಮತಿ ಸುಧಾ ಬೇವಿನಮರದ ಉಪಸ್ಥಿತರಿದ್ದರು.

## ಹಾಸನ



ಜನವರಿ 23 ರಂದು ಶ್ರೀ ಹೆಚ್.ಡಿ. ದೇವೇಗೌಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಡುವಲಹಿಪ್ಪೆ ಇಲ್ಲಿನ ಭಾರತ್ ಸ್ಕೌಟ್ಸ್-ಗೈಡ್ಸ್ ಹಾಗೂ ಇತಿಹಾಸ ಸ್ನಾತಕೋತ್ತರ ಅಧ್ಯಯನ ವಿಭಾಗದ ಸಹಯೋಗದಲ್ಲಿ ನೇತಾಜಿ ಸುಭಾಷ್‌ಚಂದ್ರ ಬೋಸ್‌ರ 121ನೇ ಜನ್ಮದಿನದ ಅಂಗವಾಗಿ ರಾಷ್ಟ್ರ ಪ್ರೇಮ ದಿನವನ್ನು ಆಚರಿಸಲಾಯಿತು. ಮುಖ್ಯ ಅತಿಥಿಗಳಾದ ಶ್ರೀ ವೀರಭದ್ರಪ್ಪ. ನಿವೃತ್ತ ಸೈನಿಕರು, ಕಾರ್ಯಕ್ರಮವನ್ನು ಉದ್ಘಾಟಿಸಿದರು. ನಂತರ ಇವರು ಮಾತನಾಡಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ನೇತಾಜಿಯವರ ಪಾತ್ರ ಹಾಗೂ ನೇತಾಜಿಯವರ ಜೀವನಕುರಿತಾದ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಿದರು. ಕಾರ್ಯಕ್ರಮದಲ್ಲಿ ಮಾತನಾಡಿದ ಕಾಲೇಜಿನ ಸ್ನಾತಕೋತ್ತರ ಇತಿಹಾಸ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ ಶ್ರೀ ವೆಂಕಟೇಶ್ ಆರ್.ಎಸ್. ರವರು ನೇತಾಜಿಯವರ ಹುಟ್ಟು, ಬೆಳವಣಿಗೆ, ಇಂಡಿಯನ್ ನ್ಯಾಷನಲ್ ಆರ್ಮಿ (ಐ.ಎನ್.ಎ.) ಯೊಡಗಿನ ಒಡನಾಟ ಹಾಗೂ ನೇತಾಜಿಯವರ ಧ್ಯೇಯೋದ್ಧೇಶಗಳನ್ನು ಕುರಿತಾದ ಸಮಗ್ರ ವಿಚಾರವನ್ನು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಿಕೊಟ್ಟರು. ಕಾಲೇಜಿನ ಕು॥ ಶಿಲ್ಪ ಪಿ. ರೇಂಜರ್ ಲೀಡರ್‌ರವರು ಮಾತನಾಡಿ ಲವ್ ದಿ ನೇಷನ್ ಅಂಡ್ ಷೋ ಇಟ್ ಇನ್ ಆ್ಯಕ್ಷನ್ ಎಂದು ವಿದ್ಯಾರ್ಥಿಗಳಿಗೆ ಕರೆ ನೀಡಿದರು. ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಮಾತನಾಡಿದ ಕಾಲೇಜಿನ ಪ್ರಾಂಶುಪಾಲರಾದ ಡಾ.ಜಿ.ಡಿ. ನಾರಾಯಣ್‌ರವರು, ಪ್ರಸ್ತುತ ಸನ್ನಿವೇಶದಲ್ಲಿ ಪ್ರತಿಯೊಬ್ಬ ನಾಗರೀಕನು ದೇಶ, ನಾಡು, ನುಡಿಯ ಬಗ್ಗೆ ಗೌರವ ಹೊಂದುವ ಹಾಗೂ ದೇಶಕಟ್ಟುವಲ್ಲಿ ಯುವಕರ ಪಾತ್ರವನ್ನು ಕುರಿತು ತಿಳಿಸಿದರು. ಸ್ಕೌಟ್ ಲೀಡರ್ ಆದ ಡಾ. ಪಿ.ಎನ್. ವಿನಯ್‌ಕುಮಾರ್ ರವರು ಸ್ವಾಗತಿಸಿದರು. ಕು॥ ಚೈತ್ರ ಎಂ.ಎಸ್. ರವರು ಕಾರ್ಯಕ್ರಮವನ್ನು ನಿರೂಪಿಸಿದರು.

* ಸ್ಕೌಟ್ಸ್-ಗೈಡ್ಸ್‌ನಿಂದ ಮಕ್ಕಳಲ್ಲಿ ಮಾನವೀಯ ಮೌಲ್ಯಗಳ ಜೊತೆಗೆ ಸಾಮಾಜಿಕ ಬದ್ಧತೆ ಬೆಳೆಯುತ್ತದೆ. ಪಠ್ಯದ ಜೊತೆ ಪಠ್ಯೇತರ ಚಟುವಟಿಕೆಗಳು, ಮಕ್ಕಳ ಸರ್ವಾಂಗೀಣ ಬೆಳವಣಿಗೆ ಸಹಕಾರಿ. ಈ ನಿಟ್ಟಿನಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಶಿಸ್ತು, ಸಂಯಮ, ಸೇವಾ ಮನೋಭಾವ, ದೃಢತೆ, ವಿಶ್ವ ಭ್ರಾತೃತ್ವವನ್ನು ಬೆಳೆಸುತ್ತದೆ ಎಂದು ಮಹಿಳಾ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ. ಎಚ್.ಕೆ. ಲಲಿತಾದೇವಿ ಅಭಿಪ್ರಾಯಪಟ್ಟರು.



ಅವರು ಹೊಳೆನರಸೀಪುರ ಮಹಿಳಾ ಸರಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಸ್ಕೌಟ್ಸ್-ಗೈಡ್ಸ್‌ನ ಪ್ರೇರಣಾ ರೇಂಜರ್ಸ್ ಘಟಕ ಉದ್ಘಾಟನಾ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಜಿಲ್ಲಾ ಸಂಘಟನಾ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ ಕಾರ್ಯಕ್ರಮದ ಉದ್ಘಾಟನೆ ಮಾಡಿ ಭಾರತದ ಭವಿಷ್ಯದ ಬಾವಿ ಪ್ರಜೆಗಳಿಗೆ ಚಂದದ ಬದುಕನ್ನು ಸ್ಕೌಟ್ಸ್-ಗೈಡ್ಸ್ ಒದಗಿಸುತ್ತದೆ. ಮಾನವರಲ್ಲಿ ಮಾನವೀಯತೆಯ ಬೆಳಕನ್ನು ಈ ಸಂಸ್ಥೆ ನೀಡುತ್ತದೆ ಎಂದರು.

ಕಾಲೇಜಿನ ಪ್ರೇರಣಾ ರೇಂಜರ್ ಲೀಡರ್ ಶ್ರೀಮತಿ ಸುಮ ಮಾತನಾಡಿ ನಮ್ಮ ಕಾಲೇಜಿನಲ್ಲಿ ರೇಂಜರ್ಸ್ ಘಟಕ ಉದ್ಘಾಟನೆಯಾಗುತ್ತಿರುವುದು ವೈಯಕ್ತಿಕವಾಗಿ ನನ್ನ ಜವಾಬ್ದಾರಿ ಹಾಗೂ ಸಂತಸವನ್ನು ಇಮ್ಮಡಿಗೊಳಿಸಿದೆ ಎಂದರು.

ಹಾಸನ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್ ಆಶಯ ನುಡಿಗಳನ್ನಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀಮತಿ ಕಾಮೇಶ್ವರಿ ಭಟ್, ಜಿಲ್ಲಾ ಸಹಕಾರ್ಯದರ್ಶಿ ಶ್ರೀ ಆರ್.ಜಿ. ಗಿರೀಶ್, ತಾಲ್ಲೂಕು ಕಾರ್ಯದರ್ಶಿ ಶ್ರೀ ನಾರಾಯಣ ಶೆಟ್ಟಿ ಮುಂತಾದವರು ಉಪಸ್ಥಿತರಿದ್ದರು.

* ಸ್ಕೌಟ್ಸ್-ಗೈಡ್‌ಗಳಲ್ಲಿ ಚಿಕ್ಕವಯಸ್ಸಿನಿಂದಲೇ ಶಿಸ್ತು, ಸಂಯಮ, ಸೇವಾ ಮನೋಭಾವ, ವಿಶ್ವಭ್ರಾತೃತ್ವದಂತಹ ಮಾನವೀಯ ಮೌಲ್ಯಗಳನ್ನು ಬೆಳೆಸುತ್ತದೆ ಎಂದು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶಿವಾನಂದ್ ಅಭಿಪ್ರಾಯಪಟ್ಟರು

ಭಾರತ್ ಸ್ಕೌಟ್ಸ್-ಗೈಡ್ಸ್ ಸಕಲೇಶಪುರ ಸ್ಥಳೀಯ ಪಟ್ಟಣದ ಸಂತ ಜೋಸೆಫ್ ಶಾಲೆಯಲ್ಲಿ ಹಮ್ಮಿಕೊಂಡಿದ್ದ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರ ಹಾಗೂ ಕಬ್ ಮಾಸ್ಟರ್ಸ್ / ಫ್ಲಾಕ್ ಲೀಡರ್ಸ್ / ಸ್ಕೌಟ್ ಮಾಸ್ಟರ್ಸ್ / ಗೈಡ್ ಕ್ಯಾಪ್ಟನ್‌ಗಳಿಗಾಗಿ ಹಮ್ಮಿಕೊಂಡಿದ್ದ ಪುನಃಶ್ಚೇತನ ತರಬೇತಿ ಕಾರ್ಯಾಗಾರವನ್ನು ಉದ್ಘಾಟನೆ ಮಾಡಿ ಮಾತನಾಡಿದರು.

ವಕೀಲರು ಹಾಗೂ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಆರ್.ಎನ್. ಕೃಷ್ಣಮೂರ್ತಿ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿ ಈ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರಿಂದ ಮಕ್ಕಳಿಗೆ ಹಾಗೂ ಶಿಕ್ಷಕರಿಗೆ ಹೊಸ ಹೊಸ ವಿಚಾರಗಳು ತಿಳಿಯುವುದರ ಜೊತೆಗೆ ಪಠ್ಯ ಹಾಗೂ ಪಠ್ಯೇತರ ಚಟುವಟಿಕೆಗಳಲ್ಲಿ ಸ್ಕೌಟ್-ಗೈಡ್‌ಗಳನ್ನು ಕ್ರಿಯಾಶೀಲರನ್ನಾಗಿ ಮಾಡುವುದರ ಜೊತೆಗೆ ನಾಯಕತ್ವದ ಗುಣಗಳನ್ನು ಬೆಳೆಸಬಹುದಾಗಿದೆ ಎಂದರು. ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್ ಮಾತನಾಡಿ ಜಿಲ್ಲೆಯಲ್ಲಿ ಸಕಲೇಶಪುರ ತಾಲ್ಲೂಕು ಸ್ಕೌಟ್ಸ್-ಗೈಡ್ಸ್ ಚಳವಳಿಯಲ್ಲಿ ತನ್ನದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸಿದೆ ಎಂದರು.

ತಾಲ್ಲೂಕು ಕಾರ್ಯದರ್ಶಿ ಶ್ರೀ ಕೆ.ಆರ್. ಕೀರ್ತಿಕುಮಾರ್ ಮಾತನಾಡಿ ಸ್ಕೌಟ್ಸ್-ಗೈಡ್ಸ್ ನಿಂದ ಮಾನವೀಯ ಮೌಲ್ಯಗಳ ಜೊತೆಗೆ ವೈಯಕ್ತಿಕ ಲಾಭವೂ ಇದೆ ಎಂದರು. ವೇದಿಕೆಯಲ್ಲಿ ಗೌರವಾಧ್ಯಕ್ಷರಾದ ಶ್ರೀ ಬಿ. ಶಾಂತರಾಜು, ಪದಾಧಿಕಾರಿಗಳಾದ ಶ್ರೀಮತಿ ಶಾರದಾ ಗುರುಮೂರ್ತಿ, ಯಡೆಹಳ್ಳಿ ಶ್ರೀ ಮಂಜುನಾಥ್, ಶ್ರೀ ರವಿಕುಮಾರ್, ಶ್ರೀಮತಿ ಪೂರ್ಣಿಮಾ, ಜಿಲ್ಲಾ ಸಂಘಟನಾ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲ ಮುಂತಾದವರು ಉಪಸ್ಥಿತರಿದ್ದರು.

## ಹಾವೇರಿ

ಫೆಬ್ರವರಿ 14-15 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ತಾಲ್ಲೂಕು ಸಂಸ್ಥೆ ಬ್ಯಾಡಗಿಯಲ್ಲಿ ತಾಲ್ಲೂಕು ಮಟ್ಟದ ಮೇಳವನ್ನು ಸಂಘಟಿಸಲಾಯಿತು. ಮೇಳದ ಉದ್ಘಾಟನೆಯನ್ನು ಶ್ರೀ ಬಿ. ಎಚ್. ರಾವಳ, ಬಿ.ಇ.ಓ., ರವರು ದೀಪ ಬೆಳಗಿಸುವುದರೊಂದಿಗೆ ಮಾಡಿದರು. ಅತಿಥಿಯಾಗಿ ಶ್ರೀಮತಿ ಮಾಧುರಿ ದೇವಧರ, ಜಿಲ್ಲಾ ಮುಖ್ಯ ಆಯುಕ್ತರು ಭಾಗವಹಿಸಿದ್ದರು. ಮೇಳದಲ್ಲಿ ರಂಗೋಲಿ, ಚಿತ್ರಕಲೆ ಮುಂತಾಧ ಚಟುವಟಿಕೆಗಳನ್ನು ನಡೆಸಲಾಯಿತು. 175 ಸ್ಕೌಟ್ಸ್, 150 ಗೈಡ್ಸ್, 30 ಶಿಕ್ಷಕರು-ಶಿಕ್ಷಕಿಯರು ಭಾಗವಹಿಸಿದ್ದರು. ಶ್ರೀ ಎ.ಎಲ್. ಶೇಖಸೂರಣಗಿ ಡಿಓಸಿ. ಶಿಬಿರದ ನಾಯಕರಾಗಿ ಕಾರ್ಯನಿರ್ವಹಿಸಿದರು.



## ಕಾರವಾರ



ಭಾರತ್ ಸ್ಕೌಟ್ಸ್-ಗೈಡ್ಸ್ ಕಾರವಾರ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಎಸ್.ಡಿ.ಎಂ. ಕಾಲೇಜು ರೋವರ್ಸ್ -ರೇಂಜರ್ಸ್ ಘಟಕ, ಲೀಲಾ ಗಣಪತಿ ಚಾರಿಟೆಬಲ್ ಟ್ರಸ್ಟ್, ರೋಟ್ರಾಕ್ಟ್, ಎಸ್.ಡಿ.ಎಂ. ಕಾಲೇಜು ಹೊನ್ನಾವರ, ಆರೋಗ್ಯ ಇಲಾಖೆ ಹೊನ್ನಾವರ ಇವರ ಸಹಯೋಗದೊಂದಿಗೆ ಹೊನ್ನಾವರದಲ್ಲಿ ರಕ್ತದಾನ ಶಿಬಿರ ನಡೆಯಿತು.

ಅಂದು ಮುಂಜಾನೆ 10-30ಕ್ಕೆ ಸರಿಯಾಗಿ ಶ್ರೀ ಆರ್.ಎಸ್ ಹೆಗಡೆ ಸಭಾಭವನದಲ್ಲಿ ಉದ್ಘಾಟನಾ ಕಾರ್ಯಕ್ರಮ ಜರುಗಿತು. ಮುಖ್ಯ ಅತಿಥಿಗಳಾಗಿ ಡಾ॥ ಉಷಾ ಹಾಸ್ಯಗಾರ್, ಡಾ॥ ರಾಜೇಶ್ ಕಿಣಿ, ಪ್ರಾಂಶುಪಾಲರಾದ ಶ್ರೀ ಎಸ್.ಎಸ್. ಹೆಗಡೆ, ಗೈಡ್ ಕಮೀಶನರ್ ಶ್ರೀಮತಿ ಶೋಭಾ ಕುಲಕರ್ಣಿ, ರೋಟೇರಿಯನ್ ಡಾ॥ ಅನಂತಮೂರ್ತಿ, ವೇದಿಕೆಯಲ್ಲಿ ಉಪಸ್ಥಿತರಿದ್ದರು. ರಕ್ತದಾನದ ಬಗ್ಗೆ ಡಾ॥ ಉಷಾ ಹಾಸ್ಯಗಾರ ರವರು ಸಂಪೂರ್ಣ ವಿವರವನ್ನು ನೀಡಿದರು.

ಸಮಾರಂಭದಲ್ಲಿ ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಬಿ.ಡಿ. ಫರ್ನಾಂಡೀಸ್, ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ವಿ.ಜಿ. ನಾಯ್ಕ ಶ್ರೀ ಜಿ.ಆರ್. ಮಡಿವಾಳ್, ಶ್ರೀ ಜನಾರ್ಧನ್ ನಾಯ್ಕ, ಶ್ರೀ ಬಿ.ಎಂ. ಭಟ್ ಉಪಸ್ಥಿತರಿದ್ದರು.

ರೊವರ್ ಲೀಡರ್ ಶ್ರೀ ಪ್ರಸನ್ನ ಶೇಠ್ ಸ್ವಾಗತಿಸಿದರೆ, ಜಿಲ್ಲಾ ಸಂಸ್ಥೆ ಕಾರ್ಯಕಾರಿ ಸಮಿತಿ ಸದಸ್ಯರಾದ ಪ್ರೊಫೆಸರ್, ಹರಿದಾಸ್ ಆರದಾರೇ ವಂದಿಸಿದರು.

## ಕೊಪ್ಪಳ

ಜನವರಿ 26 ರಂದು ಕೊಪ್ಪಳ ಜಿಲ್ಲೆಯ ಜಿಲ್ಲಾ ಕ್ರೀಡಾಂಗಣದಲ್ಲಿ ನಡೆದ 69ನೇ ಗಣರಾಜ್ಯೋತ್ಸವ ಕಾರ್ಯಕ್ರಮದ ಪಥಸಂಚಲನದಲ್ಲಿ ಜಿಲ್ಲಾ ಸಂಸ್ಥೆ ವತಿಯಿಂದ ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್ಸ್‌ನ ಏಳು ತಂಡಗಳು ಭಾಗವಹಿಸಿ ಸರಸ್ವತಿ ವಿದ್ಯಾಮಂದಿರ ಪ್ರೌಢಶಾಲೆಯ ಗೈಡ್ ತಂಡ ದ್ವಿತೀಯ ಸ್ಥಾನ, ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ ಕೊಪ್ಪಳ ತೃತೀಯ ಸ್ಥಾನವನ್ನು ಪಡೆದಿರುತ್ತಾರೆ.

ಈ ಕಾರ್ಯಕ್ರಮದಲ್ಲಿ ಜಿಲ್ಲಾ ಉಸ್ತುವಾರಿ ಸಚಿವರೂ ಹಾಗೂ ಮಾನ್ಯ ಉನ್ನತ ಶಿಕ್ಷಣ ಸಚಿವರಾದ ಶ್ರೀ ಬಸವರಾಜರಾಯರೆಡ್ಡಿ, ಮಾನ್ಯ ಶಾಸಕರಾದ ಶ್ರೀ ರಾಘವೇಂದ್ರ ಯತ್ನಾಳ್ ಜಿಲ್ಲಾಧಿಕಾರಿಗಳಾದ ಶ್ರೀಮತಿ ಕನಗವಲ್ಲಿ, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು, ಮತ್ತಿತರರು ಭಾಗವಹಿಸಿದ್ದರು. ವಿಜೇತರಿಗೆ ಫಲಕಗಳನ್ನು ವಿತರಿಸಲಾಯಿತು.

## ಕೋಲಾರ

"ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಯುವಜನತೆಯನ್ನು ಉತ್ತಮ ದಾರಿಯಲ್ಲಿ ಸಾಗಲು ಬೇಕಾದ ಉತ್ತಮ ಅವಕಾಶಗಳನ್ನು ನಿರ್ಮಿಸಿಕೊಡುತ್ತಿರುವ ಅಂತರರಾಷ್ಟ್ರೀಯ ಸೇವಾ ಸಂಸ್ಥೆಯಾಗಿದ್ದು, ಯುವಜನತೆ ತಮ್ಮ ವಿರಾಮ ವೇಳೆಯನ್ನು ಇಂಟರ್‌ನೆಟ್‌ನಲ್ಲಿ ಸಮಯವನ್ನು ಕಳೆಯದೆ ಕ್ರಿಯಾಶೀಲವಾಗಿ ಚಿಂತಿಸುವ, ಒಳ್ಳೆಯ ಅಭ್ಯಾಸಗಳನ್ನು ಮೈಗೂಡಿಸಿಕೊಳ್ಳಬೇಕಾಗಿದೆ" ಎಂದು ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ದನ್‌ರವರು ಕೋಲಾರ ನಗರದಲ್ಲಿನ ಸಹಕಾರಿ ಯೂನಿಯನ್ ಬ್ಯಾಂಕ್ ಸಭಾಂಗಣದಲ್ಲಿ ನಡೆದ ಸರ್ಫ್ ಸ್ಮಾರ್ಟ್ ಕಾರ್ಯಾಗಾರವನ್ನು ಗಿಡಕ್ಕೆ ನೀರು ಹಾಕುವ ಮೂಲಕ ಉದ್ಘಾಟಿಸಿ ಮಾತನಾಡಿದರು. ವಿವೇಕ್ ಕಂಪ್ಯೂಟರ್ಸ್‌ನ



ಶ್ರೀ ಪ್ರಮೋದ್‌ರವರು ವಿಶೇಷ ಅತಿಥಿಗಳಾಗಿ ಭಾಗವಹಿಸಿ ಡಿಜಿಟಲ್ ಇಂಡಿಯಾ ಕಾರ್ಯಕ್ರಮದಲ್ಲಿ ಯುವಜನತೆಗೆ ಇರುವ ಅವಕಾಶ ಮತ್ತು ಯುವಜನತೆ ತಮ್ಮ ಮುಂದಿನ ಜೀವನಕ್ಕೆ ಬೇಕಾದ ಕಂಪ್ಯೂಟರ್ ಶಿಕ್ಷಣವನ್ನು ಪ್ರತಿಯೊಬ್ಬರೂ ಪಡೆದು ಉತ್ತಮ ಜೀವನ ರೂಪಿಸಿಕೊಳ್ಳಬೇಕಾಗಿದೆ ಎಂದು ತಿಳಿಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ನಾರಾಯಣಸ್ವಾಮಿ, ಸಂಪನ್ಮೂಲ ವ್ಯಕ್ತಿ ಕುಮಾರಿ ರಂಜಿತಾ ಹಾಗೂ ಇತರೆ ಪದಾಧಿಕಾರಿಗಳೂ ಉಪಸ್ಥಿತರಿದ್ದರು. ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬು ಕಾರ್ಯಕ್ರಮ ನಿರೂಪಿಸಿದರು, ರೋವರ್ ಲೀಡರ್ ಶ್ರೀ ವಿಶ್ವನಾಥ್ ಸ್ವಾಗತಿಸಿದರು, ಶ್ರೀ ನಂಜುಂಡಪ್ಪ ವಂದಿಸಿದರು.



* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಜಿಲ್ಲಾ ಸಂಸ್ಥೆ ಕೋಲಾರ ವತಿಯಿಂದ ಮುಳಬಾಗಿಲು ಸಮೀಪದ ಕುರುಡುಮಲೆ ಶ್ರೀ ಗಣೇಶ ದೇವಾಲಯದ ಆವರಣದಲ್ಲಿ ಪ್ಲಾಸ್ಟಿಕ್ ಹಾಗೂ ಕಸವನ್ನು ತೆಗೆದು ಸ್ವಚ್ಛಗೊಳಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ವಿ. ಬಾಬುರವರು ರೋವರ್ಸ್ ಮತ್ತು ರೇಂಜರ್ಸ್ ಸೇವಾಕರ್ತರನ್ನು ಉದ್ದೇಶಿಸಿ ಮಾತನಾಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಯುವ ಸಮಿತಿಯ ಅಧ್ಯಕ್ಷರಾದ ಶ್ರೀ ಚೇತನ್ ಸಕ್ವಾಲ್, ಸಮಿತಿಯ ಸದಸ್ಯರು ಕೋಲಾರ ಕಾಲೇಜು ಹಾಗೂ ಬಂಗಾರಪೇಟೆ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ಭಾಗವಹಿಸಿದ್ದರು.

* ಜನವರಿ 07ರಂದು ಮಾಲೂರು ಸ್ಥಳೀಯ ಸಂಸ್ಥೆಯ ವತಿಯಿಂದ ಸ್ಕೌಟ್ಸ್-ಗೈಡ್ಸ್ ಧ್ವಜ ದಿನಾಚರಣೆ ಮತ್ತು ಅಗ್ರಗಾಮಿತ್ವದ ತರಬೇತಿ ಶಿಬಿರವನ್ನು ಮಾಲೂರು ಪಟ್ಟಣದ ಬಾಲಕಿಯರ ಶಾಲೆಯಲ್ಲಿ ನಡೆಸಲಾಯಿತು. ಈ ಸಮಾರಂಭದಲ್ಲಿ ಪೋಲಿಸ್ ಅಧಿಕಾರಿಯಾದ ಶ್ರೀ ಮುರಳಿರವರು ಧ್ವಜಗಳನ್ನು ಬಿಡುಗಡೆ ಮಾಡಿ ಶುಭ ಕೋರಿದರು. ಈ ಸಮಾರಂಭದಲ್ಲಿ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

* ಜನವರಿ 08 ರಿಂದ 09ರ ವರೆಗೆ ಚಿಕ್ಕಬಳ್ಳಾಪುರ ಜಿಲ್ಲೆಯ ಬೀಚಗಾನಹಳ್ಳಿ ಗ್ರಾಮದ ಕಸ್ತೂರ ಬಾ ಶಾಲೆಯಲ್ಲಿ ರಾಷ್ಟ್ರಪತಿ ರೋವರ್/ರೇಂಜರ್ ಪೂರ್ವ ಸಿದ್ಧತಾ ಶಿಬಿರವನ್ನು ಆಯೋಜಿಸಲಾಗಿತ್ತು.

* ಜನವರಿ 27 ರಿಂದ 29ರ ವರೆಗೆ ಕೋಲಾರ ತಾಲ್ಲೂಕಿನ ವಡಗೂರು ಗ್ರಾಮದ ಶಾಲಾ ಆವರಣದಲ್ಲಿ ಕೋಲಾರ ಜಿಲ್ಲಾ ಸಂಸ್ಥೆ, ಕೋಲಾರ ಸ್ಥಳೀಯ ಸಂಸ್ಥೆ, ವಡಗೂರು ಗ್ರಾಮ ಪಂಚಾಯತ್‌ಗಳ ಸಂಯುಕ್ತ ಆಶ್ರಯದಲ್ಲಿ ಜಿಲ್ಲಾ ಮಟ್ಟದ ಕಬ್ ಮತ್ತು ಬುಲ್‌ಬುಲ್ ಉತ್ಸವ ಹಾಗೂ ಜಿಲ್ಲಾ ಮಟ್ಟದ ಪಟಾಲಂ ನಾಯಕರ ತರಬೇತಿ ಶಿಬಿರವನ್ನು ಆಯೋಜಿಸಲಾಗಿತ್ತು. ಶಿಬಿರವನ್ನು ಕೋಲಾರ ಜಿಲ್ಲಾಧಿಕಾರಿಗಳಾದ ಶ್ರೀಮತಿ ಜಿ. ಸತ್ಯವತಿಯವರು ಉದ್ಘಾಟಿಸಿ ವಿದ್ಯಾರ್ಥಿಗಳು ಜೀವನದಲ್ಲಿ ಸೇವಾ ಮನೋಭಾವ ಬೆಳೆಸಿಕೊಳ್ಳಲು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಸಹಕಾರಿಯಾಗಿದೆ. ಜಿಲ್ಲಾ ಸಂಸ್ಥೆಗೆ ಬೇಕಾದ ನೆರವನ್ನು ನೀಡಲಾಗುವುದು ಎಂದು ತಿಳಿಸಿದರು. ಸಮಾರೋಪ ಸಮಾರಂಭದಲ್ಲಿ ಸಮಾರೋಪ ಭಾಷಣ ಮಾಡಿದ ವಿಧಾನ ಪರಿಷತ್ ಮಾಜಿ ಸಭಾಪತಿಗಳಾದ ಮಾನ್ಯ ಶ್ರೀ ವಿ.ಆರ್. ಸುದರ್ಶನ್‌ರವರು ಶಾಲಾ ಹಂತದಲ್ಲೇ ಮಕ್ಕಳಲ್ಲಿ ಶಿಸ್ತು, ಸಂಯಮ, ಸಹಬಾಳ್ವೆಯ ಮೌಲ್ಯ ಕಲಿಸಿದರೆ ಆರೋಗ್ಯವಂತ ಸಮಾಜ ನಿರ್ಮಾಣ ಮಾಡಲು ಸಾಧ್ಯ. ಈ ನಿಟ್ಟಿನಲ್ಲಿ ಈ ಸಂಸ್ಥೆ ದುಡಿಯುತ್ತಿದ್ದು ಎಲ್ಲರೂ ಕೈಜೋಡಿಸಬೇಕಾಗಿದೆ ಎಂದು ತಿಳಿಸಿದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಕಬ್ ಮತ್ತು ಬುಲ್‌ಬುಲ್ ಮಕ್ಕಳಿಗೆ ಬಂಗಾರದ ಬಾಣ ಪ್ರಶಸ್ತಿ ಪ್ರಮಾಣಪತ್ರವನ್ನು ವಿತರಿಸಿ ಮಾತನಾಡುತ್ತಾ, ರಾಜ್ಯ ಸರ್ಕಾರ ನಮ್ಮ ಸಂಸ್ಥೆಯ ಚಟುವಟಿಕೆಗಳಿಗೆ ಉತ್ತಮವಾದ ಸಹಕಾರ ನೀಡುತ್ತಿದ್ದು, ಭವಿಷ್ಯದಲ್ಲಿ ನಮ್ಮ ಸಮಾಜ ಮತ್ತಷ್ಟು ಶಾಂತಿ ಮತ್ತು ಸುಭಿಕ್ಷೆಯಿಂದ ಸಾಗಲು ಇಂದಿನಿಂದಲೇ ನಮ್ಮ ಪರಿಸರವನ್ನು ಹಸಿರಾಗಿಸುವ ಹಾಗೂ ಸ್ವಚ್ಛವಾಗಿಡುವ ಕಾರ್ಯವನ್ನು ಮಕ್ಕಳು ಹವ್ಯಾಸವಾಗಿ ರೂಢಿಸಿಕೊಂಡು ಕಾಪಾಡುವ ಹೊಣೆ ನಮ್ಮ ಮೇಲಿದೆ ಎಂದು ತಿಳಿಸಿದರು. ಈ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ, ಜಿಲ್ಲಾ ಅಧ್ಯಕ್ಷರಾದ ಶ್ರೀ ಬಸಪ್ಪಗೌಡ, ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಪ್ರಭಾಕರ್ ಭಟ್,

ಸಾರ್ವಜನಿಕ ಸಂಪರ್ಕಾಧಿಕಾರಿಯಾದ ಶ್ರೀ ಚಲ್ಲಯ್ಯ, ಉಪಾಧ್ಯಕ್ಷರಾದ ಶ್ರೀ ವಡಗೂರು ನಾಗರಾಜ್, ಜಿಲ್ಲಾ ಆಯುಕ್ತರುಗಳಾದ ಶ್ರೀ ಕೆ.ಆರ್. ಸುರೇಶ್, ಕೆ.ಆರ್. ಜಯಶ್ರೀ, ಜಿಲ್ಲಾ ಉಪನಿರ್ದೇಶಕರಾದ ಮಾನ್ಯಶ್ರೀ ಸ್ವಾಮಿ, ಕ್ಷೇತ್ರ ಸಮನ್ವಯಾಧಿಕಾರಿಗಳಾದ ಮಾನ್ಯಶ್ರೀ ರಾಮಕೃಷ್ಣಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಗ್ರಾಮ ಪಂಚಾಯಿತಿ ಅಧ್ಯಕ್ಷರಾದ ಶ್ರೀಮತಿ ಪ್ರಭಾವತಿ ಆನಂದ್, ಉಪಾಧ್ಯಕ್ಷರಾದ ಶ್ರೀ ಭೈರೇಗೌಡ, ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ನಾರಾಯಣಸ್ವಾಮಿ, ಶ್ರೀ ಶಶಿಕುಮಾರ್, ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು. ಜಿಲ್ಲೆಯ 35 ರೋವರ್ಸ್ ಮತ್ತು ರೇಂಜರ್ಸ್‌ಗಳು ಸೇವೆ ಸಲ್ಲಿಸಿದರು. 425 ಮಕ್ಕಳು ಶಿಬಿರದಲ್ಲಿ ಭಾಗವಹಿಸಿದ್ದರು. ಶಿಬಿರ ನಾಯಕರಾಗಿ ನಾರಾಯಣಸ್ವಾಮಿ ಗೌರಾಬಾಯಿ, ಉಮಾದೇವಿ, ನಂಜುಂಡಪ್ಪ ಸೇವೆ ಸಲ್ಲಿಸಿದರು.



* ಫೆಬ್ರವರಿ 07ರಂದು ಮುಳಬಾಗಿಲು ತಾಲ್ಲೂಕಿನ ಘಟ್ಟು ಗ್ರಾಮದ ವೆಂಕಟರಮಣಸ್ವಾಮಿ ದೇವಾಲಯದ ಉತ್ಸವದಲ್ಲಿ ಮುರಾರ್ಜಿ ಶಾಲೆಯ ಸ್ಕೌಟ್ಸ್ ಮತ್ತು ಮುಳಬಾಗಿಲು ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ಸೇವೆ ಸಲ್ಲಿಸಿದರು.

* ಫೆಬ್ರವರಿ 08ರಂದು ಕೆ.ಜಿ.ಎಫ್.ನ ಎಕ್ಸಲೆಂಟ್ ಶಾಲೆಯಲ್ಲಿ ನೂತನ ಕಬ್ ಮತ್ತು ಬುಲ್‌ಬುಲ್ ದಳಗಳ ಉದ್ಘಾಟನಾ ಸಮಾರಂಭ ನೆರವೇರಿತು.

* ಫೆಬ್ರವರಿ 10ರಂದು ಕೋಲಾರ ನಗರದ ರೈಲ್ವೇ ನಿಲ್ದಾಣದ ಉದ್ಯಾನದಲ್ಲಿ ಇದ್ದ ಗಿಡ ಗಂಟೆಗಳನ್ನು ಜಿಲ್ಲೆಯ 125 ರೋವರ್ಸ್ ಮತ್ತು ರೇಂಜರ್ಸ್‌ಗಳು ಸ್ವಚ್ಛ ಮಾಡಿ ಗಿಡಗಳಿಗೆ ಪಾತಿಗಳನ್ನು ಮಾಡಿದರು.

* ಫೆಬ್ರವರಿ 10ರಂದು ಪಲ್ಸ್ ಪೋಲಿಯೊ ಜಾಗೃತಿ ಸಂದೇಶವನ್ನು ಸೈಕಲ್ ಜಾಥಾ ಮೂಲಕ ದೇಶವನ್ನು ಸುತ್ತುತ್ತಿರುವ ಬೆಂಗಳೂರಿನ ಶ್ರೀ ಪವನ್ ಹಾಗೂ ಭಾಗ್ಯಶ್ರೀ ಅವರಿಗೆ ಜಿಲ್ಲಾ ಸಂಸ್ಥೆಯ ಪರವಾಗಿ ಅಭಿನಂದಿಸಿ ಶುಭಕೋರಲಾಯಿತು.



* ಫೆಬ್ರವರಿ 14 ರಿಂದ 15ರ ವರೆಗೆ ಕೋಲಾರ ಸ್ಥಳೀಯ ಸಂಸ್ಥೆ ವತಿಯಿಂದ ದ್ವಿತೀಯ ಸೋಪಾನ್ ಪರೀಕ್ಷಾ ಶಿಬಿರವನ್ನು ನಗರದ ಅಂತರಗಂಗೆ ಬೆಟ್ಟದಲ್ಲಿ ನಡೆಸಲಾಯಿತು. ಈ ಶಿಬಿರವನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪರವರು ಉದ್ಘಾಟಿಸಿದರು. ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ನಾರಾಯಣಸ್ವಾಮಿ, ಜಿಲ್ಲಾ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್, ಜಿಲ್ಲಾ ಕಾರ್ಯದರ್ಶಿ ಶ್ರೀ ಎಂ.ವಿ. ಜನಾರ್ಧನ್, ಜಿಲ್ಲಾ ಸಂಘಟನಾ ಆಯುಕ್ತ ಬಾಬು ವಿ. ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಉಮಾದೇವಿ, ಶ್ರೀ ಶಿವಕುಮಾರ್ ಮತ್ತಿತರರು ಭಾಗವಹಿಸಿದ್ದರು.

## ಮಂಡ್ಯ

ಜನವರಿ 26 ರಂದು ಗಣರಾಜ್ಯೋತ್ಸವ ಕಾರ್ಯಕ್ರಮವು ಮಂಡ್ಯಾನಗರದ ಕ್ರೀಡಾಂಗಣದಲ್ಲಿ ನಡೆದಾಗ ಸ್ಕೌಟ್ಸ್-ಗೈಡ್ಸ್ ಪಥಸಂಚಲನೆಯಲ್ಲಿ ಭಾಗವಹಿಸಿ ಪ್ರಥಮ, ದ್ವಿತೀಯ ಹಾಗೂ ತೃತೀಯ ಸ್ಥಾನವನ್ನು ಪಡೆದಿರುತ್ತಾರೆ.



ಪ್ರಥಮ ಸ್ಥಾನ : ಸರ್ಕಾರಿ ಬಾಲಕಿಯರ ಪ್ರೌಢಶಾಲೆ; ಗೈಡ್ಸ್ (ಕಲ್ಲುಕಟ್ಟಡ) ಮಂಡ್ಯನಗರ

ದ್ವಿತೀಯ ಸ್ಥಾನ : ಜೈಹಿಂದ್ ಮುಕ್ತದಳ : ಮಂಡ್ಯ

ತೃತೀಯ ಸ್ಥಾನ : ಲಕ್ಷ್ಮೀ ಜನಾರ್ಧನ ಬಾಲಕಿಯರ ಪ್ರೌಢಶಾಲೆ, ಮಂಡ್ಯ

## ರಾಯಚೂರು

ಜನವರಿ 5 ರಂದು ಎಲ್.ವಿ.ಡಿ. ಮಹಾವಿದ್ಯಾಲಯ, ರಾಯಚೂರು ಮತ್ತು ಸರ್ಕಾರಿ ಮಹಾವಿದ್ಯಾಲಯ ಸಿಂಧನೂರಿನಲ್ಲಿ ರೋವರ್ಸ್-ರೇಂಜರ್ಸ್‌ಗಳ ದೀಕ್ಷಾ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು, ಈ ದೀಕ್ಷಾ ಸಮಾರಂಭದ ಉದ್ಘಾಟನೆಯನ್ನು ಶ್ರೀ ಬಸವರಾಜ ಬೋರಡ್ಡಿ, ಜಿಲ್ಲಾ ಆಯುಕ್ತರು ನೆರವೇರಿಸಿದರು. ಈ ಸಂದರ್ಭದಲ್ಲಿ ಎಲ್.ವಿ.ಡಿ. ಮಹಾವಿದ್ಯಾಲಯದ ಪ್ರಾಚಾರ್ಯರು ಮತ್ತು ಸಿಂಧನೂರು ಮಹಾವಿದ್ಯಾಲಯದ ಪ್ರಾಚಾರ್ಯರು ಹಾಗೂ ಮಹಾವಿದ್ಯಾಲಯದ ಸಿಬ್ಬಂಧಿ ವರ್ಗದವರು ಉಪಸ್ಥಿತರಿದ್ದರು.

* ಜನವರಿ 6 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಸಿಂಧನೂರು ಹಾಗೂ ತಾಲೂಕ ಕೇಂದ್ರ ಆಸ್ಪತ್ರೆ ಸಿಂಧನೂರು ಇವರುಗಳ ಸಹಯೋಗದಲ್ಲಿ ಉಚಿತ ನೇತ್ರ ಚಿಕಿತ್ಸಾ ತಪಾಸಣೆ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು ಈ ಶಿಬಿರದಲ್ಲಿ ಆರ್.ಜಿ.ಎಮ್. ಶಾಲೆಯ ಸ್ಕೌಟ್ಸ್‌ಗಳು ಮತ್ತು ಸ್ಕೌಟ್ ಮಾಸ್ಟರಾದ ಶ್ರೀ ಪ್ರಹ್ಲಾದ್‌ರಾವ್ ದೇಸಾಯಿ ಭಾಗವಹಿಸಿದ್ದರು.



* ಜನವರಿ 12 ರಂದು ಜಿಲ್ಲಾ ಸಂಸ್ಥೆ ವತಿಯಿಂದ "ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ 155ನೇ ಜನ್ಮ ದಿನಾಚರಣೆ ಹಾಗೂ ರಸ್ತೆ ಸುರಕ್ಷಾ ಸಪ್ತಾಹ ಕಾರ್ಯಕ್ರಮದ ಅಂಗವಾಗಿ ಸಂಚಾರಿ ಪೋಲಿಸ್ ಠಾಣೆ ಮತ್ತು ಜೆ.ಸಿ.ಐ. ರಾಯಚೂರು ಇವರ ಸಹಯೋಗದೊಂದಿಗೆ ನಗರದ ಕೇಂದ್ರ ರೈಲ್ವೆ ನಿಲ್ದಾಣದಿಂದ ಮಾವಿನಕೆರೆಯವರೆಗೆ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳಿಂದ ಸೈಕಲ್ ಜಾಥಾವನ್ನು ಏರ್ಪಡಿಸಲಾಗಿತ್ತು. ನಗರ ಸಂಚಾರ ಠಾಣೆ ಪಿ.ಎಸ್.ಐ. ಶ್ರೀ ಸಿದ್ಧರಾಮೇಶ್ವರ ಗಡೇದ್ ಇವರು ಹಸಿರು ನಿಶಾನೆ ತೋರಿಸುವುದರ ಮೂಲಕ ಜಾಥಾಕ್ಕೆ ಚಾಲನೆ ನೀಡಿದರು.

ಶ್ರೀ ಅಮರೇಗೌಡ ಪಾಟೀಲ್, ಜಿಲ್ಲಾ ಖಜಾಂಚಿಗಳು ಮಾತನಾಡಿ, ಭಾರತದಲ್ಲಿ ಶೇಕಡಾ 70 ರಷ್ಟು ಯುವಕರಿದ್ದಾರೆ ಈ ಯುವ ಶಕ್ತಿಗೆ ಸರಿಯಾದ ಮಾರ್ಗದರ್ಶನ ಮಾಡಿ ಭವ್ಯ ಭಾರತದ ನಿರ್ಮಾಣ ಮಾಡುವ ಕೆಲಸ ಯುವ ಶಕ್ತಿಯ ಕೈಯಲ್ಲಿದೆ, ಆರೋಗ್ಯ, ಏಕಾಗ್ರತೆ, ಪರಿಶ್ರಮದಿಂದ ಏಳಿಗೆ ಸಾಧ್ಯ ಎಂದು ಹೇಳಿದರು. ಈ ಸಂದರ್ಭದಲ್ಲಿ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ರವಿಕುಮಾರ ಜೆ.ಸಿ.ಐ. ಅಧ್ಯಕ್ಷರು, ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಬಸವರಾಜ ಬೋರೆಡ್ಡಿ, ಜಿಲ್ಲಾ ಆಯುಕ್ತರು (ಸ್ಕೌ), ಶ್ರೀಮತಿ ಆಲಿಯಾ ಖಾನಂ, ಜಿಲ್ಲಾ ಆಯುಕ್ತರು(ಗೈ), ಶ್ರೀ ವಿಶ್ವನಾಥಗೌಡ, ಜಿಲ್ಲಾ ಸಂಘಟಕರು ಹಾಗೂ ವಿವಿಧ ಶಾಲೆಗಳ ನೂರಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್ ಭಾಗವಹಿಸಿದ್ದರು.



* ಜನವರಿ 17 ರಂದು ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ, ಸಿಂಧನೂರು ಮತ್ತು ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯ ಇವರುಗಳ ಸಹಯೋಗದಲ್ಲಿ ಸ್ವಾಮಿ ವಿವೇಕಾನಂದ ರೋವರ್ ಕ್ರ್ಯೂವ್, ಗದ್ರಟಗಿ ಅಮರೇಗೌಡ ರೋವರ್ ಕ್ರ್ಯೂವ್ ಮತ್ತು ಮದರ್ ತೆರೆಸಾ ರೇಂಜರ್ ಟೀಮ್ ಸಿಂಧನೂರು ವತಿಯಿಂದ ಪ್ರಧಾನ ಮಂತ್ರಿಯುವರ ಸ್ವಚ್ಛಭಾರತ್ ಅಭಿಯಾನದ ಜನಜಾಗೃತಿ ಕಾರ್ಯಕ್ರಮದ ಅಂಗವಾಗಿ 48 ರೋವರ್ಸ್, 18 ರೇಂಜರ್ಸ್ ಸಿಂಧನೂರಿನಿಂದ ಬೂತಲ ದಿನ್ನಿ ಗ್ರಾಮದವರೆಗೆ ಪಾದ ಯಾತ್ರೆ ಮಾಡುವ ಮೂಲಕ ಬೂತಲ ದಿನ್ನಿ ಗ್ರಾಮಕ್ಕೆ ತೆರಳಿ, ಗ್ರಾಮ ಪಂಚಾಯತ್ ಮುಖ್ಯಸ್ಥರನ್ನು ಭೇಟಿ ಮಾಡಿ ಅವರ ಸಹಕಾರದೊಂದಿಗೆ, ಗ್ರಾಮದ ರಸ್ತೆ, ದೇವಸ್ಥಾನ, ಶಾಲೆ, ಗ್ರಾಮದ ಬೀದಿಗಳನ್ನು ಸ್ವಚ್ಛತೆ (ಶ್ರಮದಾನ) ಮಾಡುವ ಮೂಲಕ ಪರಿಸರದ ಸ್ವಚ್ಛತೆ ಮತ್ತು ಶೌಚಾಲಯದ ಬಗ್ಗೆ ಗ್ರಾಮಸ್ಥರಲ್ಲಿ ಅರಿವು ಮೂಡಿಸಿದರು. ಮನೆ ಮನೆಗೆ ಭೇಟಿ ನೀಡಿ

ಶೌಚಾಲಯದ ಬಳಕೆ, ಪ್ಲಾಸ್ಟಿಕ್ ನಿಷೇಧ, ಪರಿಸರದ ಮಹತ್ವದ ಬಗ್ಗೆ ತಿಳುವಳಿಕೆ ನೀಡಿದರು. ಈ ಜನಜಾಗೃತಿ ಕಾರ್ಯಕ್ರಮದಲ್ಲಿ ರೋವರ್ ಲೀಡರಾದ ಶ್ರೀ ಖಾದರ್ ಬಾಷಾ ಮತ್ತು ಆಂಗ್ಲ ಉಪನ್ಯಾಸಕಿಯಾದ ಶ್ರೀಮತಿ ಸುನಿತಾ ಭಾಗವಹಿಸಿದ್ದರು, ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಎಸ್. ಶರಣೇಗೌಡ ಮತ್ತು ಡಾ॥ದಾವಲ್ ಸಾಬ್ ನಧಾಪ್, ಪ್ರಾಚಾರ್ಯರು ಹಸಿರು ನಿಶಾನೆ ತೋರಿಸುವ ಮೂಲಕ ಪಾದಯಾತ್ರೆಗೆ ಚಾಲನೆ ನೀಡಿದರು.

* ಫೆಬ್ರವರಿ 6 ರಿಂದ 8 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸ್ಥಳೀಯ ಸಂಸ್ಥೆ, ದೇವದುರ್ಗ ಇವರುಗಳ ಸಹಯೋಗದಲ್ಲಿ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಮೇಳವನ್ನು ದೇವದುರ್ಗ ನಗರದ ಬಸವ ಪ್ರೌಢಶಾಲೆಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಪೆಬ್ರವರಿ 7 ರಂದು ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಇವರು ಜ್ಯೋತಿ ಬೆಳಗಿಸುವುದರ ಮೂಲಕ ಮೇಳಕ್ಕೆ ಚಾಲನೆ ನೀಡಿದರು. ನಂತರ ಅವರು ಮಾತನಾಡಿ, ಮೂವತ್ತು ವರ್ಷದ ಶಾಸಕತ್ವದ ಜನ ಸೇವೆಗಿಂತಲೂ ಮಕ್ಕಳ ಸೇವೆ ನನಗೆ ಸಂತೃಪ್ತಿ ತಂದಿದೆ. ರಾಜ್ಯದಲ್ಲಿನ 5 ವರೆ ಲಕ್ಷ ಸ್ಕೌಟ್ಸ್-ಗೈಡ್ಸ್ ಸೇವೆ ಅನನ್ಯ. ಸ್ವಚ್ಛತೆ, ಪರಿಸರ ಸಂರಕ್ಷಣೆಯ ದೃಷ್ಟಿಕೋನವನ್ನು ಇಟ್ಟುಕೊಂಡು ಬೆಡನ್ ಪೋವೆಲ್ ಸ್ಥಾಪಿಸಿದ ಈ ಸಂಸ್ಥೆ ಸಾಕಷ್ಟು ಅಭಿವೃದ್ಧಿ ಕಾರ್ಯಗಳನ್ನು ಮಾಡಿದೆ. ಜೊತೆಗೆ ವಿದ್ಯಾರ್ಥಿಗಳಲ್ಲಿ ಶಿಸ್ತು, ಸಂಯಮ, ನಾಯಕತ್ವದ ಗುಣಗಳನ್ನು ಬೆಳೆಸುತ್ತಿದೆ ಎಂದರು. ಮುಂದಿನ ದಿನಗಳಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದಲ್ಲಿ ಸ್ಕೌಟ್ಸ್-ಗೈಡ್ಸ್ ಕಡ್ಡಾಯ ಶಿಕ್ಷಣಕ್ಕೆ ಒತ್ತಾಯಿಸಿದ್ದು, ಜಾರಿಗೆ ಬರುವ ನಿರೀಕ್ಷೆ ಇದೆ ಎಂದರು.



ಇದೇ ಸಂದರ್ಭದಲ್ಲಿ ಸ್ಕೌಟ್ಸ್-ಗೈಡ್ಸ್ ಚಳವಳಿಯಲ್ಲಿ ಉತ್ತಮ ಸೇವೆ ಸಲ್ಲಿಸಿದ ಘಟಕ/ನಾಯಕಿಯರಿಗೆ ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಕಾರ್ಯಕ್ರಮದಲ್ಲಿ ಪ್ರಾಸ್ತಾವಿಕವಾಗಿ ಶ್ರೀ ರಾವುತರಾವ್ ಬರೂರ ಮಾಜಿ ಜಿಲ್ಲಾ ಸಂಘಟನಾ ಆಯುಕ್ತರು ಮಾತನಾಡಿದರು.

ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಹನುಮಂತ ಕಟ್ಟಿಮನಿ, ಅಧ್ಯಕ್ಷರು, ತಾ.ಪಂ. ದೇವದುರ್ಗ ಇವರು ವಹಿಸಿ ಮಾತನಾಡಿದರು. ಉದ್ಘಾಟನಾ ಕಾರ್ಯಕ್ರಮದಲ್ಲಿ ದೇಶಭಕ್ತಿಗೀತೆಗಳಿಗೆ ಉತ್ತಮ ರೀತಿಯ ನೃತ್ಯ ಪ್ರದರ್ಶನವನ್ನು ನೀಡಿದ ಸರ್ಕಾರಿ ಬಾಲಕಿಯರ ಮಾದರಿಯ ಹಿರಿಯ ಪ್ರಾಥಮಿಕ ಶಾಲೆ, ದೇವದುರ್ಗದ ಗೈಡ್ಸ್‌ಗಳಿಗೆ ರಾಜ್ಯ ಮುಖ್ಯ ಆಯುಕ್ತರು ರೂ. 10 ಸಾವಿರ ಬಹುಮಾನವನ್ನು ನೀಡಿದರು.

ಜಿಲ್ಲಾ ಮೇಳದ ಅಂಗವಾಗಿ ದೇವದುರ್ಗ ಪಟ್ಟಣದಲ್ಲಿ ಫೆಬ್ರವರಿ 7 ರಂದು ಬೆಳಿಗ್ಗೆ 9.00 ಗಂಟೆಗೆ ಪಥಸಂಚಲನ ನಡೆಸಲಾಯಿತು. ಶ್ರೀ ಹನುಮಂತ ಕಟ್ಟಿಮನಿ ಅಧ್ಯಕ್ಷರು, ತಾಲ್ಲೂಕು ಪಂಚಾಯತ್, ದೇವದುರ್ಗ ಇವರು ಹಸಿರು ನಿಶಾನೆ ತೋರಿಸಿ ಚಾಲನೆ ನೀಡಿದರು. ಪಥಸಂಚಲನವು ಪಟ್ಟಣದ ಪ್ರಮುಖ ರಸ್ತೆಗಳಿಂದ ಸಂಚರಿಸಿ ಜನ ಜಾಗೃತಿ ಮೂಡಿಸಲಾಯಿತು. ಉದ್ಘಾಟನಾ ಸಮಾರಂಭದ ವೇದಿಕೆಯಲ್ಲಿ ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು, ಡಾ. ಎಸ್.ಎಂ. ಹತ್ತಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಶ್ರೀ ಜಗನ್ನಾಥರಾಯ ಪಾಟೀಲ್, ಜಿಲ್ಲಾ ಆಯುಕ್ತರುಗಳಾದ ಶ್ರೀ ಬಸವರಾಜ ಬೋರೆಡ್ಡಿ, ಶ್ರೀಮತಿ ಕೆ. ಆಲಿಯಾ ಖಾನಂ, ಉಪಸ್ಥಿತರಿದ್ದರು. ಶ್ರೀ ತಿರುಪತಿ ಸೂಗೂರ ಅಧ್ಯಕ್ಷರು, ಸ್ಥಳೀಯ ಸಂಸ್ಥೆ, ದೇವದುರ್ಗ ಇವರು ಎಲ್ಲರನ್ನೂ ಸ್ವಾಗತಿಸಿದರು. ಶ್ರೀ ರಂಗನಾಥ ಸಿ. ಕಾರ್ಯದರ್ಶಿಗಳು ವಂದಿಸಿದರು. ಶ್ರೀ ಬಾಲಪ್ಪ ಬಾವಿಮನಿ ನಿರೂಪಿಸಿದರು. ಜಿಲ್ಲೆಯ ಎಲ್ಲಾ ತಾಲೂಕಿನಿಂದ 550 ಕ್ಕೂ ಹೆಚ್ಚು ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್ ಭಾಗವಹಿಸಿದ್ದರು.



ಮೇಳದ ಅಂಗವಾಗಿ ವಸ್ತು ಪ್ರದರ್ಶನ, ಆಹಾರ ಮೇಳ, ಸಾಹಸಮಯ ಚಟುವಟಿಕೆ, ಮಾರ್ಚ್‌ಫಾಸ್ಟ್, ಶಿಬಿರಾಗ್ನಿ ಕಾರ್ಯಕ್ರಮ, ಕರಕೌಶಲ, ಚಿತ್ರಕಲೆ ಸ್ಪರ್ಧೆಗಳನ್ನು ಆಯೋಜಿಸಲಾಗಿತ್ತು. ಅಗ್ನಿಶಾಮಕ ದಳದವರಿಂದ

ವಿಪತ್ತು ನಿರ್ವಹಣೆಯ ಬಗ್ಗೆ ಪ್ರಾಯೋಗಿಕ ಪ್ರದರ್ಶನವನ್ನು ಮಾಡಲಾಯಿತು. ಫೆಬ್ರವರಿ 8 ರಂದು ಮಧ್ಯಾಹ್ನ ಮೇಳದ ಸಮಾರೋಪ ಸಮಾರಂಭ ನಡೆಯಿತು. ಈ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಶ್ರೀ ಎ. ರಾಜಶೇಖರ್ ನಾಯಕ ಆರ್.ಡಿ.ಸಿ.ಸಿ. ಬ್ಯಾಂಕಿನ ಮಾಜಿ ಅಧ್ಯಕ್ಷರು ಹಾಗೂ ಹಾಲಿ ನಿರ್ದೇಶಕರು ಆಗಮಿಸಿ ವಿವಿಧ ಸ್ಪರ್ಧೆಗಳಲ್ಲಿ ವಿಜೇತರಾದ ಸ್ಕೌಟ್-ಗೈಡ್‌ಗಳಿಗೆ ಹಾಗೂ ಭಾಗವಹಿಸಿದ ಮಕ್ಕಳಿಗೆ ಪ್ರಶಸ್ತಿ ಪತ್ರ ಮತ್ತು ನೆನಪಿನ ಕಾಣಿಕೆ ನೀಡಿದರು. ನಂತರ ಅವರು ಮಾತನಾಡಿ, ಉತ್ತಮ ರಾಷ್ಟ್ರ ನಿರ್ಮಾಣಕ್ಕೆ ಸ್ಕೌಟ್ಸ್-ಗೈಡ್ಸ್ ಮೇಳ ಸಹಾಯಕಾರಿಯಾಗಲಿದೆ. ಇಂತಹ ಉತ್ತಮ ಕಾರ್ಯಕ್ರಮವನ್ನು ನಿರ್ವಹಿಸಿದರು. ಶ್ರೀ ಸುರೇಶ ಪಾಟೀಲ್ ಉಪಾಧ್ಯಕ್ಷರು ಸ್ವಾಗತಿಸಿದರು. ಶ್ರೀಲಿಂಗರಾಜ ಹಯ್ಯಾಳ ಖಜಾಂಚಿಗಳು ವಂದಿಸಿದರು.

## ಶಿವಮೊಗ್ಗ

ಜನವರಿ 20 ರಂದು ಸ.ಪ್ರ.ದರ್ಜೆ ಕಾಲೇಜು, ತೀರ್ಥಹಳ್ಳಿ ಇಲ್ಲಿನ ರೋವರ್ಸ್-ರೇಂಜರ್ಸ್ ಘಟಕದ ವತಿಯಿಂದ ಪುರಾಣ ಪ್ರಸಿದ್ಧ ಶ್ರೀ ಶಿವಪ್ಪನಾಯಕನ ಆಳ್ವಿಕೆಗೆ ಒಳಪಟ್ಟ ಕವಲೇದುರ್ಗಕ್ಕೆ ಒಂದು ದಿನದ ಪ್ರಕೃತಿ ಅಧ್ಯಯನ ಮತ್ತು ಚಾರಣ ಶಿಬಿರವನ್ನು ಏರ್ಪಡಿಸಲಾಗಿತ್ತು. ಈ ಶಿಬಿರವು ಪ್ರಾಂಶುಪಾಲರಾದ ಡಾ.ಬಿ.ಎಂ. ಜಯಶೀಲ, ಇವರ ಮಾರ್ಗದರ್ಶನದಲ್ಲಿ ನಡೆಯಿತು. ಈ ಶಿಬಿರವನ್ನು ರೋವರ್ಸ್ ಸ್ಕೌಟ್ಸ್ ಲೀಡರ್ ಆದ ಶ್ರೀ ಬಿ.ಹೆಚ್. ವಾಸಪ್ಪ ಇವರ ನೇತೃತ್ವದಲ್ಲಿ ಆಯೋಜಿಸಲಾಯಿತು. ಈ ಶಿಬಿರದಲ್ಲಿ ಸಂಪನ್ಮೂಲ ವ್ಯಕ್ತಿಗಳಾಗಿ ಶ್ರೀ ಮಹಮ್ಮದ್ ಇಕ್ಬಾಲ್, ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ, ಕುಮಾರಿ ಅಸ್ಮತ್, ಉಪನ್ಯಾಸಕರು, ಕನ್ನಡ ವಿಭಾಗ, ಹಾಗೂ ಎಂಟು ರೋವರ್ಸ್ ಮತ್ತು ಎಂಟು ರೋವರ್ಸ್ ಮತ್ತು ಎಂಟು ರೇಂಜರ್ಸ್ ಭಾಗವಹಿಸಿದ್ದರು.



## ತುಮಕೂರು

ಜನವರಿ 26 ರ ಗಣರಾಜ್ಯೋತ್ಸವ ದಿನದಂದು ಮಹಾತ್ಮಾಗಾಂಧಿ ಕ್ರೀಡಾಂಗಣದಲ್ಲಿ ಭಾರತೀಯ ರೆಡ್ ಕ್ರಾಸ್ ಸಂಸ್ಥೆ, ವಾಕ್-ಶ್ರವಣದೋಷವುಳ್ಳ ಮಕ್ಕಳ ಶಾಲೆಯ ವತಿಯಿಂದ ರಾಜ್ಯ ಪುರಸ್ಕಾರ ಪಡೆದ ವಿದ್ಯಾರ್ಥಿಗಳಾದ ಕು॥ ಕಾರ್ತಿಕ್, ಕು॥ ಆದರ್ಶ ಇವರನ್ನು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಟಿ.ಬಿ. ಜಯಚಂದ್ರ, ಲೋಕಸಭಾ ಸದಸ್ಯರಾದ ಶ್ರೀ ಮುದ್ದಹನುಮೇಗೌಡರು, ವಿಧಾನಸಭಾ ಸದಸ್ಯರಾದ ಶ್ರೀ ಸುರೇಶ್‌ಗೌಡರು, ಶ್ರೀ ರಫೀಕ್ ಅಹಮ್ಮದ್ ಮತ್ತು ಜಿಲ್ಲಾಧಿಕಾರಿಗಳು, ಸಿಇಓ ಗಳು ಸನ್ಮಾನಿಸಿ ಗೌರವಿಸಿದರು.




* ಜನವರಿ 10 ರಂದು ಜಿಲ್ಲಾ ಮಟ್ಟದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ರ‍್ಯಾಲಿ ಕಾರ್ಯಕ್ರಮವನ್ನು ದಿವ್ಯ ಕನ್ವೆನ್ಷನ್ ಹಾಲ್, ಕುಣಿಗಲ್ ಇಲ್ಲಿ ಆಯೋಜಿಸಲಾಗಿತ್ತು. ರ‍್ಯಾಲಿಯಲ್ಲಿ ಜಿಲ್ಲೆಯ ಸುಮಾರು 1120 ಕಬ್ಸ್-ಬುಲ್‌ಬುಲ್ಸ್ ಸ್ಕೌಟ್-ಗೈಡ್‌ಗಳು ಹಾಗೂ 67 ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು.

ಶ್ರೀಮತಿ ನಳಿನ ಬೈರಪ್ಪ ಅಧ್ಯಕ್ಷರು ಪಟ್ಟಣ ಪಂಚಾಯತಿ- ಅಧ್ಯಕ್ಷರು ಭಾ.ಸ್ಕೌ-ಗೈ. ಸ್ಥಳೀಯ ಸಂಸ್ಥೆ ಕುಣಿಗಲ್, ಇವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಸೋಮಶೇಖರಯ್ಯ ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಗೌರವಾಧ್ಯಕ್ಷರು. ಭಾ.ಸೌ.ಗೈ. ಸ್ಥಳಿಯ ಸಂಸ್ಥೆ ಕುಣಿಗಲ್ ಉದ್ಘಾಟನೆ ನೆರವೇರಿಸಿದರು.

ಶ್ರೀ ವೇಣುಗೋಪಾಲಕೃಷ್ಣ, ಡಿ.ಸಿ.(ಎಸ್.) ಶ್ರೀಮತಿ ಸುಭಾಷಿಣಿ ಆರ್. ಕುಮಾರ್, ಶ್ರೀ ಡಿ. ಕೃಷ್ಣ, ಅಕ್ಷರ ದಾಸೋಹ ನಿರ್ದೇಶಕರು ಭಾಗವಹಿಸಿದ್ದರು. ಶ್ರೀ ಕೆ.ಎ. ಬಸವಾಚಾರ್ ಎಲ್ಲರನ್ನು ಸ್ವಾಗತಿಸಿದರು.

ಶ್ರೀಮತಿ ನಳಿನ ಬೈರಪ್ಪನವರು ಪಥಸಂಚಲನ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಮಧ್ಯಾಹ್ನ 2.30 ಗಂಟೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳು ಪ್ರಾರಂಭವಾಯಿತು.

ಮಕ್ಕಳಿಗೆ ಚಿತ್ರ ಬರೆಯುವ, ರಂಗೋಲಿ ಬಿಡಿಸುವ, ಸಂಗೀತ, ನೃತ್ಯ, ಮುಂತಾದ ಚಟುವಟಿಕೆಗಳನ್ನು ಏಪಶಡಿಸಲಾಗಿತ್ತು.

ಸಂಜೆ 4 ಗಂಟಗೆ ಮುಕ್ತಾಯ ಸಮಾರಂಭವನ್ನು ಹಮ್ಮಿಕೊಳ್ಳಲಾಯಿತು. ಶ್ರೀಮತಿ ನಳಿನ ಬೈರಪ್ಪ, ಅಧ್ಯಕ್ಷತೆ ವಹಿಸಿದ್ದರು. ಶ್ರೀಮತಿ ಪಂಕಜ ಎಂ.ಎ., ಮುಖ್ಯಾಧಿಕಾರಿಗಳು, ಪಟ್ಟಣ ಪಂಚಾಯತಿ, ಕುಣಿಗಲ್, ಶ್ರೀ ರಾಜಣ್ಣ, ಸಮಾಜ ಸೇವಕರು ಮುಖ್ಯ ಅತಿಥಿಗಳಾಗಿದ್ದರು. ಶ್ರೀ ಮಂಜುನಾಥ್, ಕಾರ್ಯದರ್ಶಿ, ಎಲ್ಲರನ್ನು ಸ್ವಾಗತಿಸಿದರು. ಶ್ರೀಮತಿ ಬೈರಪ್ಪನವರು ಮಾತನಾಡಿ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಇಂತಹ ಕಾರ್ಯಕ್ರಮಗಳು ಬಹಳ ಅವಶ್ಯಕ ಎಂದು ತಿಳಿಸಿದರು. ಶ್ರೀಮತಿ ರಾಧಾ, ಹೆಚ್.ಹೆಚ್. ಸಹ ಕಾರ್ಯದರ್ಶಿಯವರು ಎಲ್ಲರನ್ನೂ ವಂದಿಸಿದರು

## ವಿಜಯಪುರ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಫೆಬ್ರವರಿ 20ರಂದು ವಿಜಯಪುರ ಜಿಲ್ಲಾ ಸಂಸ್ಥೆಗೆ ಭೇಟಿ ನೀಡಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಕಾರ್ಯಚಟುವಟಿಕೆಗಳನ್ನು ಪರಿಶೀಲನೆ ಮಾಡಿ ಮೆಚ್ಚುಗೆ ವ್ಯಕ್ತಪಡಿಸಿದರು. ಸಭೆಯಲ್ಲಿ ಉಪಸ್ಥಿತರಿದ್ದ ವಿಷಯ ಪರಿವೀಕ್ಷಕರಾದ ಶ್ರೀ ಎ.ಬಿ. ವಾಡೆ ಮತ್ತು ಶ್ರೀಮತಿ ಡಿ.ಜಿ. ಚಾಳೀಕರ ಈ ಬಗ್ಗೆ ಮಾತನಾಡಿ ಇಲಾಖೆಯಿಂದ ಶಾಲಾ ಸಂದರ್ಶನ ಕಾಲಕ್ಕೆ ಪರಿಶೀಲಿಸಿ ಸೂಕ್ತ ಕ್ರಮ ತೆಗೆದುಕೊಳ್ಳಲಾಗುವುದು ಎಂದರು. ಸಭೆಯ ನಂತರ ಬುರಣಾಪುರದಲ್ಲಿ ಅಭಿವೃದ್ಧಿಪಡಿಸಲಾಗುತ್ತಿರುವ ಜಿಲ್ಲಾ ಸ್ಕೌಟ್ಸ್ ಗೈಡ್ಸ್ ತರಬೇತಿ ಕೇಂದ್ರಕ್ಕೆ ಭೇಟಿ ನೀಡಿ ಕಾಮಗಾರಿಯನ್ನು ಪರಿಶೀಲಿಸಿದರು.



ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಬಸನಗೌಡ ಹರನಾಳ ಅವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಖಜಾಂಚಿ ಸಹಜಾನಂದ ದಂಧರಗಿ ಉಪಾಧ್ಯಕ್ಷ ಶ್ರೀ ಸುರೇಶ ಸಡಶ್ಯಾಳ, ಶ್ರೀಮತಿ ನಿರ್ಮಲಾ ಕಲಶೆಟ್ಟಿ ವೇದಿಕೆಯಲ್ಲಿ ಉಪಸ್ಥಿತರಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಪರಶುರಾಮ ಕುಂಬಾರ ಎಲ್ಲರನ್ನು ಸ್ವಾಗತಿಸಿದರು.

ಸಭೆಯಲ್ಲಿ ಸಂಸ್ಥೆಯ ಪದಾಧಿಕಾರಿಗಳು ವಿವಿಧ ಶಾಲೆಗಳ ಸ್ಕೌಟರ್ ಮತ್ತು ಗೈಡರ್ ಪಾಲ್ಗೊಂಡಿದ್ದರು. ಕೊನೆಯಲ್ಲಿ ಜಿಲ್ಲಾ ಸಂಘಟನಾ ಆಯುಕ್ತ ಶ್ರೀ ಪ್ರಕಾಶ ಹದ್ಲಿ ವಂದಿಸಿದರು.

## ಗಮನಿಸಿ

**2017-18 ನೇ ಸಾಲಿಗೆ ಜಿಲ್ಲಾ ಸಂಸ್ಥೆಗೆಗಳಿಗೆ ನೀಡಿದ ಕಬ್ಸ್ -ಬುಲ್‌ಬುಲ್, ಸ್ಕೌಟ್-ಗೈಡ್, ರೋವರ್-ರೇಂಜರ್ ದಳಗಳ ನೊಂದಣಿ ಶುಲ್ಕವನ್ನು ಮಾರ್ಚ್ 31 ರ ರೊಳಗೆ ರಾಜ್ಯ ಸಂಸ್ಥೆಗೆ ಕಳುಹಿಸಲು ಕೋರಿದೆ.**

**- ರಾಜ್ಯ ಕಾರ್ಯದರ್ಶಿ**

# ರೋವರ್ ಸ್ಕೌಟುಗಳು – ಶತಮಾನೋತ್ಸವ

ಲೇಖಕ :
ರಾ. ಚಂದ್ರಶೇಖರನ್, ಎಲ್.ಟಿ.(ಸಿ), ಹೆಚ್.ಡಬ್ಲ್ಯೂ.ಬಿ.(ಆರ್)

1907ರಲ್ಲಿ ಸ್ಕೌಟಿಂಗ್ ಪ್ರಾರಂಭವಾದದ್ದು; 1910 ರಲ್ಲಿ ಗೈಡಿಂಗ್ ಪ್ರಾರಂಭವಾದದ್ದು, ಮುಂದುವರೆದು 1916ರಲ್ಲಿ ಕಬ್ಬಿಂಗ್ (ಮರಿಗಳ ವಿಭಾಗ) ಪ್ರಾರಂಭವಾದದ್ದು ಈಗಾಗಲೇ ಎಲ್ಲರಿಗೂ ತಿಳಿದ ವಿಷಯ

ಮೊದಲ ವಿಶ್ವ ಮಹಾಸಮರದ ವೇಳೆ, ಯುವಕರಿಗೆ ಸ್ಕೌಟಿಂಗ್ ಕಾರ್ಯಕ್ರಮದ ಅವಶ್ಯಕತೆ ಕಂಡುಬಂದಿತು. 1918ರಲ್ಲಿ ರೋವರಿಂಗ್ ಅಸ್ತಿತ್ವಕ್ಕೆ ಬಂದಿತು. 1922ರಲ್ಲಿ ಬಿ.ಪಿ.ರವರಿಗೆ "ರೋವರಿಂಗ್ ಟು ಸಕ್ಸಸ್" (ಕನ್ನಡದಲ್ಲಿ ಜೀವನ ಸಫಲತೆಯ ಮಾರ್ಗ–2011 ರ ರಾಜ್ಯ ಸಂಸ್ಥೆಯ ಪ್ರಕಟಣೆ) ಪುಸ್ತಕವು ಬಿಡುಗಡೆಯಾಯಿತು. ಈ ಪುಸ್ತಕದಲ್ಲಿ ವಯಸ್ಕರ ಜೀವನವು ಸುಖಕರವಾಗಿರಲು ಮಾರ್ಗದರ್ಶಕ ಅಂಶಗಳೂ, ಆ ಕಾರಣ ಯುವಕರು ಎಚ್ಚರಿಕೆ ವಹಿಸಿ ಅನುಸರಿಸಬೇಕಾದ ಕ್ರಮಗಳೂ, ತಾವಾಗಿ ಕಲ್ಪಿಸಿ, ಕಾರ್ಯಗತ ಮಾಡಬಹುದಾದ ಸಹಾಯಕ ಅಂಶಗಳೂ ಇವೆ.

ವಿಶ್ವ ಸ್ಕೌಟ್ ಸಂಸ್ಥೆಯ 2023 ರ ಕಾಲ್ಪನಿಕ ಯೋಜನೆಯನ್ವಯ, ಸಂಸ್ಥೆಯ ಯುವಕರ ಹಾಗೂ ಹಿರಿಯರ ವಿಭಾಗಗಳು, ಕಾರ್ಯಗತ ಮಾಡಬಹುದಾದ ಚಟುವಟಿಕೆಗಳಿಗೆ ರೋವರ್ ಸ್ಕೌಟ್ ವಿಭಾಗದ ಶತಮಾನೋತ್ಸವವು ಒಂದು ಅದ್ಭುತ ಅವಕಾಶವಾಗಿದೆ. ರೋವರ್ ವಯೋಮಾನದ ಯುವಕರು ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸಂಸ್ಥೆಯ ಸದಸ್ಯರಾಗಲೂ, ಕಿರಿಯ ವಿಭಾಗಗಳಿಗೆ ಸೇವೆ ಸಲ್ಲಿಸಲೂ ಅನಾಯಾಚಿತವಾಗಿ ಒದಗಿ ಬಂದ ಅವಕಾಶವಾಗಿದೆ. ರೋವರ್‌ಗಳು ಪ್ರಸ್ತುತದಲ್ಲಿ ಉತ್ತಮ ರೀತಿಯಲ್ಲಿ ಸ್ಕೌಟಿಂಗ ಅಭ್ಯಾಸ ಮಾಡಬೇಕು. ಭವಿಷ್ಯತ್ತಿನಲ್ಲಿ ಸಂಸ್ಥೆಯ ಉತ್ತಮ ನಾಯಕರುಗಳಾಗಬೇಕು.

ವೋಸಂ ನವರು ಶತಮಾನೋತ್ಸವದ ವಿಷಯವಸ್ತುವನ್ನು (ಖಿಜಟಜ) ಹೀಗೆ ಹೇಳಿದ್ದಾರೆ.

* ಇಂದಿಗೆ ರೋವರ್ ಸ್ಕೌಟಿಂಗ್ ನಿಮ್ಮ ಕಾರ್ಯಕ್ರಮಗಳ ಭಾಗವಾಗಿರಬೇಕು. ನಾಳೆಗೆ ಅದು ನಿಮ್ಮ ಜೀವನದ ರೀತಿ ಆಗಬೇಕು.

* ಪ್ರತಿವ್ಯಕ್ತಿಯೂ ತನ್ನ ಮುಂದಿನ ಜೀವನದ ಹಾದಿಯನ್ನು ರೂಪಿಸಿಕೊಳ್ಳಲು ಇದೊಂದು ಸುವರ್ಣಾವಕಾಶವಾಗಿದೆ.

* ವರ್ತಮಾನ ಹಾಗೂ ಭವಿಷ್ಯ ಕಾಲಗಳು, ಅಮಿತ ಅವಕಾಶಗಳು ನಿಮ್ಮ ಮುಂದಿದೆ.

ಈ ಶತಮಾನ ವರ್ಷಪೂರಾ ಸ್ಥಳೀಯ, ಜಿಲ್ಲಾ, ರಾಜ್ಯ, ರಾಷ್ಟ್ರ, ಅಂತಾರಾಷ್ಟ್ರೀಯ ಮಟ್ಟಗಳಲ್ಲಿ ಯುವಜನರು ಸಕ್ರಿಯವಾಗಿ ಭಾಗವಹಿಸಿ, ರೂಪಿಸಿ, ಕಾರ್ಯಗತ ಮಾಡುವ ಸಮುದಾಯ ಯೋಜನೆಗಳು, ಸಾಹಸ ಕಾರ್ಯಕ್ರಮಗಳು ಮುಂತಾದುವನ್ನು ನಡೆಸುವ ಜವಾಬ್ದಾರಿ ನಿಮ್ಮದಾಗಿದೆ.

ಅಂತರಾಷ್ಟ್ರೀಯ ಯುವದಿನವಾದ 12–08–2018 (ಭಾನುವಾರ) ದಂದು, ವಿಶ್ವದಾದ್ಯಂತ "ರೋವರಿಂಗ್ ಶತಮಾನೋತ್ಸವ" ದಿನವನ್ನಾಗಿ ಘೋಷಿಸಿದೆ. ತದರನ್ವಯ ಭಾರತ್ ಸ್ಕೌಟ್ಸ್–ಗೈಡ್ಸ್ ಸಂಸ್ಥೆಯು 2018ರ ಮೊದಲ ದಿನದಿಂದಲೇ ಸಂಯುಕ್ತವಾಗಿ ಆಚರಿಸುತ್ತಿದೆ. ಈಗಾಗಲೇ ಕರ್ನಾಟಕದಲ್ಲಿ ಹತ್ತಾರು ಕಾರ್ಯಕ್ರಮಗಳು ನಡೆದಿವೆ. ಪ್ರಸ್ತುತ ನಡೆಯುತ್ತಿವೆ, ಮುಂದೆಯೂ ನಡೆಯುತ್ತದೆ. ಸಾಮಾನ್ಯವಾಗಿ ಇಂತಹ ಸಂದರ್ಭಗಳಲ್ಲಿ ಹಿಂದೆ ನಡೆದಿರುವುದನ್ನು ಇಣುಕಿ ನೋಡುವುದು ರೂಢಿ ಹೆಚ್ಚಲ್ಲದಿದ್ದರೂ ಒಂದೆರಡು ಅಂಶಗಳನ್ನು ಮೆಲುಕು ಹಾಕೋಣ.

ಹಳೆಯ ಮೈಸೂರು ನಾಡಿನಲ್ಲಿ ಜಿಲ್ಲೆಗೊಂದು, ಎರಡರಂತೆ ಮುಕ್ತ ತಂಡಗಳೂ, ಮೈಸೂರು ವಿಶ್ವವಿದ್ಯಾಲಯದ ಕಾಲೇಜುಗಳಲ್ಲಿ ಪ್ರಾಯೋಜಿತ ತಂಡಗಳೂ ಕೆಲಸ ಮಾಡುತ್ತಿದ್ದುವು. ಅಷ್ಟೇ ಅಲ್ಲದೆ ಅನೇಕ ಕೈಗಾರಿಕಾ ಘಟಕಗಳಲ್ಲಿ ರೋವರ್ ತಂಡಗಳಿದ್ದುವು.

ಮೊದಲ 50 ವರ್ಷಗಳಲ್ಲಿ ಬೆಂಗಳೂರಿನ ಕಬ್ಬನ್ ಪಾರ್ಕ್; ಬೆಂಗಳೂರು ಸೆಂಟ್ರಲ್ ಕಾಲೇಜಿನ ಕ್ರಿಕೇಟ್ ಪೆವಿಲಿಯನ್ ಮತ್ತು ಕೋಲಾರದ ಕಾಲೇಜು ಆವರಣಗಳಲ್ಲಿ ಮೊದಲ ಮೂರು ರೋವರ್ ಮೂಟ್‌ಗಳು ನಡೆದವು. ನಾಡಿನ ಪ್ರಮುಖ ಸಮಾವೇಶಗಳು, ಜಾತ್ರೆಗಳು–ನಂಜನಗೂಡು, ಶ್ರವಣಬೆಳಗೊಳ, ಮೈಸೂರು ದಸರಾ ಇತ್ಯಾದಿ ಸಂದರ್ಭಗಳಲ್ಲಿ ಅಪಘಾತಗಳ ವೇಳೆ ಪ್ರಥಮ ಚಿಕಿತ್ಸೆ, ಅಗ್ನಿಶಮನ ಕಾರ್ಯ, ಸಂಚಾರ ನಿಯಂತ್ರಣ, ಮಾರ್ಗದರ್ಶನ, ಕಳೆದುಹೋದ ವಸ್ತುಗಳು ಮತ್ತು ದಾರಿತಪ್ಪಿದ ಮಕ್ಕಳ ರಕ್ಷಣೆ ಇತ್ಯಾದಿ ಸೇವಾ ಕಾರ್ಯಗಳು ನಡೆದಿದ್ದುವು.

1934–35ರಲ್ಲಿ ಗಿಲ್‌ವೆಲ್ ಪಾರ್ಕ್‌ನ ಕ್ಯಾಂಪ್ ಚೀಫ್ ಆಗಿದ್ದ ಕರ್ನಲ್ ಜೆ.ಎಸ್. ವಿಲ್ಸನ್ ಅವರು ಭಾರತದಲ್ಲಿ ವೀಕ್ಷಿಸುವುದಕ್ಕಾಗಿಯೇ, ವ್ಯಾಪಕವಾಗಿ ರೋವರ್ ತಂಡವು ಸಮೀಪದ ಹಳ್ಳಿಗಳನ್ನು ಗೃಹಕೈಗಾರಿಕೆಗಳ ಬಗ್ಗೆ ನಡೆಸಿದ್ದ ಸೇವೆಯನ್ನು ರಾಜಾಸ್ಥಾನದ ಗ್ರಾಮೀಣ ರೋವರಿಂಗ್ ಸೇವಾ ಕಾರ್ಯಗಳನ್ನೂ, ತಮಿಳುನಾಡಿನ "ಹಳ್ಳಿಗೊಂದು ಕಬ್ ಪ್ಯಾಕ್" ಕಾರ್ಯಕ್ರಮವನ್ನು ಹಮ್ಮಿಕೊಂಡು 1600 ಕಬ್ ಪ್ಯಾಕ್‌ಗಳನ್ನು ನಡೆಸುತ್ತಿದ್ದುದನ್ನೂ, ವಿಶೇಷವಾಗಿ ಉಲ್ಲೇಖಿಸಿರುತ್ತಾರೆ.

ಬಿ.ಪಿ. ರವರು "ರೋವರಿಂಗ್ ಸೇವಾನಿರತ, ಬಯಲು ಜೀವನದ ಸೋದರತೆ" ಎಂದು ಹೇಳಿದ್ದಾರೆ. "ರೋವರ್ ಸ್ಕೌಟಿಂಗ್ ಬಹುಮುಖವಾಗಿ, ವಿಶೇಷ ರೀತಿಯಲ್ಲಿ, ಶಕ್ತ್ಯಾನುಸಾರ ಸ್ವಯಂಪ್ರೇರಿತ ಸೇವೆಯನ್ನು ಸಲ್ಲಿಸುತ್ತವಾದರೂ, ಇದು ಸಮಾಜ ಸೇವಾ ಸಂಸ್ಥೆಯಲ್ಲ. ಬಯಲು ಚಟುವಟಿಕೆಗಳ ಮೂಲಕ, ಸ್ಕೌಟಿಂಗ್ ಅಭ್ಯಾಸ ಮಾಡಬೇಕು. ತಮ್ಮ ಜೀವನವನ್ನು ರೂಪಿಸಿಕೊಂಡು, ಆಂತರಿಕ ಶಿಸ್ತನ್ನು ಅಳವಡಿಸಿಕೊಳ್ಳಬೇಕು. ತನ್ಮೂಲಕ ಯುವಕರು ಉತ್ತಮ ಪೌರರಾಗಿ ತಯಾರಾಗಬೇಕು. ಇದೇ ಸ್ಕೌಟಿಂಗ್‌ನ ಗುರಿ ಎಂದು ತಿಳಿಸಿದ್ದಾರೆ.

1935ರಲ್ಲಿ ಆಸ್ಟ್ರೇಲಿಯಾದ ವಿಕ್ಟೋರಿಯಾ ಪ್ರಾಂತದ, ಫ್ರಾಂಕ್‌ಸ್ಟನ್‌ನಲ್ಲಿ ರಾಷ್ಟ್ರೀಯ ರೋವರ್ ಮೂಟ್ ನಡೆಯಿತು. ಅದು ಬಿ.ಪಿ. ರವರು ಭಾಗವಹಿಸಿದ ಅಂತಿಮ ರೋವರ್ ಮೂಟ್. ಹಾಗಾಗಿ ಅವರು ಆ ಮೂಟ್‌ನಲ್ಲಿ ನೀಡಿದ ಸಂದೇಶವನ್ನು "ರೋವರ್‌ಗಳಿಗೆ ಬಿ.ಪಿ. ರವರ ಅಂತಿಮ ಸಂದೇಶ" ಎಂದೇ ಹೇಳಬಹುದು. ಅವರ ಸಂದೇಶದ ನಾಲ್ಕು ಮುಖ್ಯ ಅಂಶಗಳನ್ನು ಇಲ್ಲಿ ಉಲ್ಲೇಖಿಸಿದ್ದೇನೆ.

1) ಕರ್ತವ್ಯ : ಸೌಖ್ಯವೇ? ಕರ್ತವ್ಯವೇ? ಎಂದು ತುಮುಲವುಂಟಾದಾಗ "ಕರ್ತವ್ಯವೇ ಮೊದಲು" ಎಂಬುದು ನೆನಪಿರಲಿ

2) ನಿಷ್ಪಕ್ಷಪಾತ : ಯಾವುದೇ ಪ್ರಶ್ನೆಗೂ ಹಲವು ಮುಖಗಳಿರುತ್ತವೆ. ಇತರರ ಮಾತಿಗೆ ಮರುಳಾಗಬೇಡಿ ಪರಾಪರ ವಿವೇಚನೆ, ನಿರ್ಧಾರ ನಿಮ್ಮದು.

3) ಪ್ರೇಮ : ಪ್ರೇಮ ಎಂಬುದೊಂದು ದೈವೀ ಭಾವನೆ. ಅದು ನಿಮ್ಮಲ್ಲಿ ಅಂತರ್ವಾಹಿನಿಯಾಗಿರಲಿ. ಹೃದಯಾಂತರಾಳದಿಂದ ಉಕ್ಕಿಬರುವ ಆ ಬುದ್ಧಿ ನಿಮ್ಮದು. ಇತರರಿಗೆ ಹಂಚುತ್ತಾ ಹೋದಂತೆ, ಅದು ಒಳಗಿನಿಂದ ಉಕ್ಕಿಬರುತ್ತದೆ. ಇತರರ ಬಗ್ಗೆ ನಿಮ್ಮ ನಡವಳಿಕೆಯು ಪ್ರೇಮಮಯವಾಗಿದ್ದರೆ, ಅದರಿಂದ ನಿಮಗೆ ಅತಿಶಯವಾದ ಆನಂದ ಸಿಗುತ್ತದೆ.

4) ನಿಮ್ಮ ಜೀವನದ ಗುರಿ : ನಿಮ್ಮ ಜೀವನದ ಗುರಿ ಹೇಗಿರಬೇಕೆಂದರೆ, ನಿಮ್ಮ ನಿಧನಾ ನಂತರದಲ್ಲಿ ನಿಮ್ಮೊಡನೆ ಒಡನಾಡಿದ ಬಂಧುಬಳಗ, ಮಿತ್ರವರ್ಗ ಹಾಗಿರಲಿ, ಹುಟ್ಟಿಸಿದ ದೇವರೂ ನಿಮ್ಮ ನಿಧನಕ್ಕೆ ಪಶ್ಚಾತ್ತಾಪ ಪಡುವಂತಿರಬೇಕು.

"ವಿದಾಯ ಹೇಳುತ್ತಿದ್ದೇನೆ. ಇನ್ನು ಹೊರಡಿ. ಇಲ್ಲಿಂದ ಹೊರಟ ಪ್ರತಿಯೊಬ್ಬರೂ ಪ್ರೇಮ ಮತ್ತು ಒಲವುಗಳ ದೂತರಾಗಬೇಕು. ದೇವರು ನಿಮಗೆ ಕಾರ್ಯೋನ್ಮುಖರಾಗಲು ಚೈತನ್ಯವನ್ನು ನೀಡಲಿ. ನಿಮ್ಮ ಕಾರ್ಯದಲ್ಲಿ ಯಶಸ್ಸು ದೊರಕಲಿ".

# Gone Home



**Miss. Kala S. Phadnis,** LT(G) Former State Organising Commissioner (Guides) of Maharastra State and Former Joint Director (SS), Bharat Scouts and Guides, National Headquarters, New Delhi Passed away at pune on 12th February 2018. She was aged about eighty Seven years. She served as Joint Director of Support Services at National Headquarters. She leaves behind a large number of Friends, Well-Wishers and Admirers all over the country.

We Pray Good Almighty to give necessary Courage and Strength to the members of Her Family to Bear this Irreparable Loss. May Her Soul Rest in Peace



**Sri Chandrashekharachar,** ALT(Cubs), expired on 1st February 2018 at Bengaluru. He was aged 71years. He has left behind wife and 3 children. He served the Scout Movement for more than 30 Years in different capacities. He was secretary of Chamrajapet and Vijayanagara Local Associations. His contribution to the Movement is appreciable.

We Pray God Almighty to Give Necessary Courage and Strength to His Family Members to Bear this Irreprable Loss. May His Soul Rest in Peace.

## ಶ್ರದ್ಧಾಂಜಲಿ



ನಿವೃತ್ತ ಸ್ಕೌಟ್ ಮಾಸ್ಟರ್ **ಶ್ರೀ ವಿ.ಎಂ. ಭಟ್ಕಳ್** ರವರು ಇತ್ತೀಚೆಗೆ ಹೊನ್ನಾವರದಲ್ಲಿ ನಿಧನರಾದರೆಂದು ತಿಳಿಸಲು ವಿಷಾಧಿಸುತ್ತೇವೆ. ಅವರು ಒಬ್ಬ ಮಗಳು, ಇಬ್ಬರು ಗಂಡುಮಕ್ಕಳು ಮತ್ತು ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ. ಅವರು ಹೊನ್ನಾವರ ತಾಲೂಕಿನ ತಾಲೂಕು ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ್ದರು ಹಾಗೂ 25 ವರ್ಷಗಳ ಕಾಲ ಸ್ಕೌಟ್ ಮಾಸ್ಟರ್ ಆಗಿ ಕೆಲಸ ನಿರ್ವಹಿಸಿದ್ದರು. ಹೊನ್ನಾವರದ ಪ್ರತಿಷ್ಠಿತ ಸೇಂಟ್ ಥಾಮಸ್ ಶಾಲೆಯಲ್ಲಿ ವಿಜ್ಞಾನ ಮತ್ತು ಇಂಗ್ಲಿಷ್ ಶಿಕ್ಷಕರಾಗಿ ಸೇವೆ ಸಲ್ಲಿಸಿರುತ್ತಾರೆ. ದಿವಂಗತರು 1975ಕ್ಕಿಂತ ಮುಂಚೆಯೇ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳನ್ನು ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ನಿರ್ವಹಿಸಿದ್ದಾರೆ. ಇವರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗು ಇವರ ಕುಟುಂಬಕ್ಕೆ ದುಃಖ ಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ





ಫೆಬ್ರವರಿ 6 ರಿಂದ 8ರ ವರೆಗೆ ರಾಯಚೂರು ಜಿಲ್ಲೆ ದೇವದುರ್ಗದಲ್ಲಿ ಜರುಗಿದ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಮೇಳವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಕೆ. ತಿಮ್ಮಯ್ಯ, ಡಾ. ಎಸ್.ಎಂ. ಹತ್ತಿ, ಬಿ.ಇ.ಓ., ಶ್ರೀ ಜಗನ್ನಾಥರಾಯ ಪಾಟೀಲ್, ಜಿಲ್ಲಾ ಆಯುಕ್ತರುಗಳಾದ ಶ್ರೀ ಬಸವರಾಜ ಬೋರೆಡ್ಡಿ, ಶ್ರೀಮತಿ ಕೆ. ಆಲಿಯಾ ಖಾನಂ ಹಾಗೂ ಇತರ ಜಿಲ್ಲಾ ಮತ್ತು ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು, ಸ್ಥಳೀಯ ಮುಖಂಡರುಗಳು ಚಿತ್ರದಲ್ಲಿದ್ದಾರೆ.



ಜನವರಿ 27ರಿಂದ 29ರ ವರೆಗೆ ಕೋಲಾರ ಜಿಲ್ಲೆ ವಡಗೂರಿನಲ್ಲಿ ನಡೆದ ಜಿಲ್ಲಾ ಮಟ್ಟದ ಕಬ್-ಬುಲ್‌ಬುಲ್ ಉತ್ಸವ ಕಾರ್ಯಕ್ರಮದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಬುಲ್-ಬುಲ್ಸ್‌ಗಳಿಗೆ ಪ್ರಶಸ್ತಿ ಪತ್ರಗಳನ್ನು ನೀಡಿದರು. ಮಾಜಿ ವಿಧಾನ ಪರಿಷತ್ ಸಭಾಪತಿಗಳಾದ ಶ್ರೀ ವಿ.ಆರ್. ಸುದರ್ಶನ್, ಶ್ರೀ ಕೆ.ವಿ. ಶಂಕರಪ್ಪ, ಡಿ.ಸಿ.ಸಿ., ಶ್ರೀ ಬಿಸಪ್ಪಗೌಡ ಮತ್ತು ಇತರ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಜನವರಿ 20ರಂದು ಶಿವಮೊಗ್ಗ ಜಿಲ್ಲೆ ತೀರ್ಥಹಳ್ಳಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್ ಮತ್ತು ರೇಂಜರ್ಸ್‌ಗಳು ಹಮ್ಮಿಕೊಂಡಿದ್ದ ಪ್ರಕೃತಿ ಅಧ್ಯಯನ ಚಾರಣ ಶಿಬಿರದ ಉದ್ಘಾಟನೆಯನ್ನು ಪ್ರಾಂಶುಪಾಲರಾದ ಡಾ. ಬಿ.ಎಂ. ಜಯಶೀಲ ನೆರವೇರಿಸಿದರು. ಆರ್.ಎಸ್.ಎಲ್. ಶ್ರೀ ಬಿ.ಹೆಚ್. ವಾಸಪ್ಪ ಮತ್ತು ರೋವರ್-ರೇಂಜರ್‌ಗಳು ಚಿತ್ರದಲ್ಲಿದ್ದಾರೆ.



ಜನವರಿ 12ರಂದು ಶಿರಸಿ ಆನೆಮರಿಯಾ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳಿಂದ ಹಮ್ಮಿಕೊಂಡಿದ್ದ ಹೊರಸಂಚಾರ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು.



**On the Occasion of the "Founders and Thinking Day" the HAL Rovers Celebrated the Day with children of Jeevith Ananthashrama and were given Cake & Food.**

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 36)





A View of the Scouts-Guides, Scouters-Guiders, Parents, Wellwishers and Invitees on the occasion of Rajyapuraskar Rally held on 3rd February 2018 at Rajbhavan, Bengaluru






A View of Cultural Programme held at Rajbhavan from Guides of Nirman International School on the occasion of Rajyapuraskar Rally at Rajbhavan, Bengaluru





Different Activities of Cubs-Bulbuls on the occasion of State Level 40th Cub & Bulbul Utsav held during January 2018 at Darwada



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26